

ವಂದಿಪೆನಮ್ಮ ಮುದ್ದು ಶಾರದೆ ಶರ
ಚಂದಿರ ವದನೆ ಶಾರದೆ -ಪ-

ಇಂದೀವರಾಕ್ಷಿ ಶತಾನಂದನ ಪ್ರಿಯೆ ದೇವಿ
ಕುಂದುನೋಡದೆ ಶ್ರುತಿವಂದ್ಯೆ ಜ್ಞಾನವ ನೀಡೆ -ಅ.ಪ.-

ಸಿತಾಬ್ಜಾಸನೆ ಸುಖದಾಯಕೀ ಸುರ
ನಾಥಾರಾಧಿತೆ ವಿಶ್ವನಾಯಕೀ
ವೀತದುರೀತೆ ಶಿವಮಾತೆ ಸದ್ಗುಣಮಣಿ
ವ್ರಾತೆ ವೇದೋಪನಿಷದ್ಗೀತೆ ವಾಗ್ದೇವಿ ಮಾತೆ -1-

ಕೋಕಿಲವಾಣಿ ಕವಿಸೇವಿತೆ ಎನ್ನ
ವಾಕು ಲಾಲಿಸೆ ಮುನಿವಂದಿತೆ
ಪೋಕನೆಂದು ಸುವಿವೇಕ ಬುದ್ಧಿಯನಿತ್ತು
ಸಾಕು ಸಜ್ಜನರನ್ನು ಮನ್ನಿಸು ವಾಗ್ಜಾಯೆ -2-

ಪಾತಕಿ ಗಳೊಡನಾಡಿ ನಾ ನಿನ್ನ
ಪೂತಾಬ್ಜಪದ ಭಜಸದಾದೆ ನಾ
ಪಾತಕವೆಣಿಸದೆ ಸೀತಾರಮಣ ಜಗ
ನ್ನಾಥ ವಿಠಲ ನಂಘ್ರಿ ಗೀತಾಮೃತವನುಣಿಸು -3-

--ಶ್ರೀ ಜಗನ್ನಾಥದಾಸರು.

ಸಂದರ್ಶಿಸಿ. ಆನಂದಿಸಿ.

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ
# ತಿರುಚಾನೂರು



# ವಾರ್ಷಿಕ ಬ್ರಹ್ಮೋತ್ಸವ

18--11--95 ರಿಂದ 27--11--95 ವರೆಗೆ

## ಕಾರ್ಯಕ್ರಮ ವಿವರ

| ದಿನಾಂಕ | ವಾರ | ಹಗಲು | ರಾತ್ರಿ |
|---|---|---|---|
| 18--11--95 | ಶನಿವಾರ | --- | ಸೇನಾಪತಿ ಉತ್ಸವ. |
| 19--11--95 | ಭಾನುವಾರ | ಧ್ವಜಾರೋಹಣ | ಚಿಕ್ಕ ಶೇಷವಾಹನ. |
| 20--11--95 | ಸೋಮವಾರ | ಟಾಂಜಾನ್ ಉತ್ಸವ | ಹಂಸವಾಹನ. |
| 21--11--95 | ಮಂಗಳವಾರ | ಮುತ್ತಿನ ಪಂಜರವಾಹನ | ಸಿಂಹವಾಹನ. |
| 22--11--95 | ಬುಧವಾರ | ಕಲ್ಪವೃಕ್ಷವಾಹನ | ಹನುಮದ್ವಾಹನ. |
| 23--11--95 | ಗುರುವಾರ | ಪಲ್ಲಕಿ ಉತ್ಸವ<br>ಸಂಜೆ -- ವಸಂತೋತ್ಸವ | ಗಜವಾಹನ |
| 24--11--95 | ಶುಕ್ರವಾರ | ಸರ್ವಭೂಪಾಲವಾಹನ | ಗರುಡವಾಹನ. |
| 25--11--95 | ಶನಿವಾರ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ. |
| 26--11--95 | ಭಾನುವಾರ | ರಥೋತ್ಸವ | ಅಶ್ವವಾಹನ. |
| 27--11--95 | ಸೋಮವಾರ | ಅವಭೃತಸ್ನಾನ | ಧ್ವಜಾವರೋಹಣ. |

ಸೂಚನೆ :ತಿರುಚಾನೂರು ತಿರುಪತಿಯಿಂದ ಐದು ಕಿಲೋಮೀಟರ್ ದೂರದಲ್ಲಿದೆ. ತಿರುಪತಿಯಿಂದ ಒಂದರ ಹಿಂದೆ ಒಂದು ಬಸ್ ಸೌಲಭ್ಯವಿದೆ. ಬ್ರಹ್ಮೋತ್ಸವದ ದಿನಗಳಲ್ಲಿ ಪ್ರತಿದಿನವೂ ಸಾಂಸ್ಕೃತಿಕ ಕಾರ್ಯಕ್ರಮಗಳುಂಟು. ಹೆಚ್ಚಿನ ವಿವರಗಳಿಗಾಗಿ ತಮ್ಮ ಬಳಿಯ ತಿ.ತಿ.ದೇ. ವಿಚಾರಣಾಕೇಂದ್ರದಲ್ಲಿ ವಿಚಾರಿಸಿ.

ನೀವೂ ಬನ್ನಿ ತಿ. ತಿ. ದೇ. ನಿಮ್ಮವರನ್ನೂ ಕರೆತನ್ನಿ




ಸಂಪುಟ -- 26 ಅಕ್ಟೋಬರ್ 1995 ಸಂಚಿಕೆ --5


# ವಿಷಯಸೂಚಿ



ಮುಖ ಚಿತ್ರ: ಶ್ರೀ ದುರ್ಗಾದೇವಿ.

ಹಿಂಬದಿಯಲ್ಲಿ: ಅನ್ನವರಂ ಶ್ರೀಸತ್ಯನಾರಾಯಣಸ್ವಾಮಿ ಮಂದಿರ.

ಒಳಗಡೆ: 1) ಪೊಯ್‌ಗೈ ಆಳ್ವಾರ್.
2) ವೇದಾಂತದೇಶಿಕರ್.


ಗೌರವ ಸಂಪಾದಕರು:

ಎನ್. ರಮೇಶ್‌ಕುಮಾರ್ ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ,
ತಿ.ತಿ.ದೇ. ತಿರುಪತಿ.

ಸಂಪಾದಕ:

ಎಸ್.ಎಸ್. ರಾಮಮೂರ್ತಿ, ಎಂ. ಎ.

ಉಪಸಂಪಾದಕ:

ಬಿ. ಎಸ್. ಶ್ರೀನಿವಾಸನ್ ಎಂ. ಎ.,

ಮುದ್ರಣ:

ಪಿ. ಮೋಹನ್ ರಾವ್

ಲೇಖನ/ಜಾಹೀರಾತುಗಳಿಗೆ
ಮಿಕ್ಕವಿವರಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ.

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ
ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ
ದೊರೆಯುವುವು.

**ಬಿಡಿ ಪ್ರತಿ ೨--೦೦**

**ವಾರ್ಷಿಕ ಚಂದಾ ೨೪--೦೦**


ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. --ಸಂ|||








ಸನಾತನ ಧರ್ಮದಲ್ಲಿ ದಿನಕ್ಕೊಂದು ವ್ರತ, ಹಬ್ಬ, ಉತ್ಸವ. ವರ್ಷಪೂರ್ತಿ ಯಾವುದೋ ಒಂದು ಹೆಸರಿನಲ್ಲಿ ಆ ಸೃಷ್ಟಿಕರ್ತನನ್ನು ನೆನೆದು, ಅವನ ಕೊಡುಗೆಯಾದ ಜೀವನದ ಉತ್ಸಾಹಕ್ಕಾಗಿ ಅವನಿಗೆ ನೆನಪಿನ ನಮನವನ್ನರ್ಪಿಸಿ, ಬಾಳನ್ನು ಹಸನಾಗಿಸಿಕೊಳ್ಳುವ ಹೊಸಬೆಳಕಿನತ್ತ ಸಾಗುವ ಪ್ರಯತ್ನ ಪಡಲು ಮೊದಲಿಡುವ ಕೆಲಸವನ್ನು ಮಾಡುವುದು ಪರಂಪರೆಯಿಂದ ನಡೆದು ಬಂದಿದೆ. ರಾಮ ನವಮಿಯೆಂದು ಅವನ ಅವತಾರದ ಆರಂಭವನ್ನು ಗುರುತಿಸಿ ಅವನಂತೆ ನಡೆಯಲು ಶಕ್ತಿಯುಂಟಾಗಲಿ ಎಂದು ಬೇಡಿದರೆ, ಕೃಷ್ಣಜಯಂತಿಯಂದು ಅವನ ಹುಟ್ಟನ್ನು ನೆನೆದು, ಅವನು ತೋರಿದ್ದ, ತಿಳಿಸಿದ ಹಾದಿಯನ್ನು ಮನಗಾಣಲು ಪ್ರಯತ್ನಿಸುವ ಪ್ರಾರ್ಥನೆ ಮಾಡುತ್ತೇವೆ. ಗಣಪತಿಯನ್ನು ಸರ್ವವಿಘ್ನಗಳನ್ನು ಹರಿಸಿ, ಬಾಳಹಾದಿಯನ್ನು ಸುಗಮಗೊಳಿಸು ಸ್ವಾಮಿ ಎಂದು ವಿನಾಯಕ ಚತುರ್ಥಿಯಂದು ಪ್ರಾರ್ಥಿಸಿದರೆ, ವರಲಕ್ಷ್ಮೀವ್ರತದಂದು ಬದುಕು ಲಕ್ಷ್ಮೀಮಯವಾಗಲಿ ಎಂದು ಪ್ರಾರ್ಥನೆ ಸಲ್ಲಿಸುವುದು ಇದೆ.

ಇಂತಲ್ಲಿ ದೀಪಾವಳಿಯಿದೆ. ಇದು ಒಂದು ಹಬ್ಬವಲ್ಲ, ಹಬ್ಬಗಳ ಸಾಲು. ಒಟ್ಟಿಗೆ ಮೂರುದಿನ, ಕೆಲವೆಡೆ ಯಮದ್ವಿತೀಯವನ್ನೂ ಸೇರಿಸಿ ನಾಲ್ಕು ದಿನ. ಇದು ಹಬ್ಬವೇ ಎಂದರೆ ಖಚಿತವಾಗಿ ಹೇಳುವುದು ಕಷ್ಟ. ಇದೊಂದು ಉತ್ಸವ ಸರಣಿ. ಒಬ್ಬ ನರಕಾಸುರ, ಒಬ್ಬ ಬಲಿಚಕ್ರವರ್ತಿ - ಈ ಇಬ್ಬರು ಅಸುರರ ಮಧ್ಯೆ ಬರುವ ಒಂದು ಅಮಾವಾಸ್ಯೆಯ ಪಿತೃತರ್ಪಣ. ಇವೆಲ್ಲವೂ ಉತ್ಸವದ ಅಂಶಗಳೇ ಆಗಿ ಹಬ್ಬವಾಯಿತು. ನರಕಾಸುರ ವಧೆಯಿಂದಾಗಿ ಲೋಕ ಸಂತಸಗೊಂಡಿತಾದರೆ, ಬಲಿ ದಮನದಿಂದಲೂ ಅದೇ ಭಾವದೀಪ್ತವಾಯಿತು. ಮಧ್ಯೆ ಪಿತೃಕಾರ್ಯದ ತೃಪ್ತಿಯೂ ಸೇರಿ ಬದುಕು ತಣಿಯಿತು ಎಂಬುದರಿಂದಲೂ ಇದು ಹಬ್ಬ, ಇನ್ನೊಂದು ದೃಷ್ಟಿಯಿಂದಲೂ ನೋಡಬಹುದು. ನರಕಾಸುರ ವಧೆಯಿಂದ ಸ್ವಾಮಿಯ ದುಷ್ಟಶಿಕ್ಷಣ ಜಗಜ್ಜಾಹೀರಾದರೆ, ಬಲಿಯ ಪ್ರಥಮ ಹಂತದ ಗರ್ವಭಂಗ, ನಂತರ ಅವನ ಭಕ್ತಿಗೆ ಒಲಿದು ಬಾಗಿಲ ಬಂಟನಾಗುವ ಸೇವೆಯಿಂದ ಸ್ವಾಮಿಯ ಸೌಲಭ್ಯಗುಣ ಪ್ರಕಾಶಿತವಾಯಿತು. ಎರಡೂ ಕಡೆಯೂ ಸ್ವಾಮಿಯ ಎರಡು ಗುಣಗಳು ಹೆಚ್ಚು ಪ್ರಕಾಶವಾಗಿ, ಹೊಸ ಅರುಣೋದಯವನ್ನು ಘೋಷಿಸುವಂತಾಯಿತು. ಮಧ್ಯದ ಅಮಾವಾಸ್ಯೆಯೂ ಇದರ ಸಂಕೇತವೇ ಇರಬಹುದೇನೋ-ಹೀಗಾಗಿ ಇದು ಹಬ್ಬದ ಕಾರಣವಾಯಿತು.

ಹಲವು ಹಿರಿಯರ ಅಭಿಪ್ರಾಯದಲ್ಲಿ ದೀಪಾವಳಿ ಕತ್ತಲಿನಲ್ಲಿ ಸ್ವರ್ಗದೆಡೆಗೆ ಸಾಗುವ ಪಿತೃದೇವತೆಗಳಿಗೆ ಬೆಳಕು ತೋರುವುದರ ಸಂಕೇತವೆಂದೂ ತಿಳಿಯಲಾಗಿದೆ.

ಒಟ್ಟಿನಲ್ಲಿ ಒಂದು ತಮ. ಅದರ ಗರ್ಭದಿಂದ ಬೆಳಕಿನ ಉತ್ಪತ್ತಿ. ದೀಪ ಹಚ್ಚಿ ಮಾರ್ಗವನ್ನು ಬೆಳಕು ಮಾಡಿಕೊಂಡು ಮುಂದುವರಿಯುವಿಕೆ. ವಿಕ್ರಮಶಕೆಯ ಆರಂಭದ ದಿನವೂ, ಮಹಾವೀರನ ಪರಿನಿರ್ವಾಣವೂ ಆದ ಕಾರಣದಿಂದಲೂ, ಲಕ್ಷ್ಮೀಪೂಜೆಯಿಂದ ವರ್ಷಾರಂಭಮಾಡುವ ಉತ್ಸಾಹ ತೋರಿ ಬಂದಿತು. ಎಲ್ಲವೂ ಬೆರೆತು ದೀಪಾವಳಿಯ ಸಾಲು ಬೆಳಗುವಂತಾಯಿತು ಎಂಬುದರಲ್ಲಿ ಅಭ್ಯಂತರವೇನಿರದು. ಶ್ರೀ ವೆಂಕಟೇಶ್ವರ ಸ್ವಾಮಿಯ ಸನ್ನಿಧಿಯಲ್ಲೂ ದೀಪಾವಳಿ ಆಸ್ಥಾನ ನಡೆಯುವ ಈ ಶುಭಸಂದರ್ಭದಲ್ಲಿ ಬೆಳಕಿನ ಕುಡಿಗಳನ್ನು ಹಚ್ಚಿಟ್ಟು 'ಕರುಣಾಳು ಬಾ ಬೆಳಕೆ' ಎಂದು ಪ್ರಾರ್ಥಿಸುವುದರಲ್ಲಿ ಔಚಿತ್ಯವುಂಟು. ಆನಂದವೂ ಉಂಟು. ಆದ್ದರಿಂದ ತಮದಿಂದ ಜ್ಯೋತಿಯೆಡೆಗೆ ಸಾಗುವ ದೀಪಾವಳಿ ಪ್ರತಿಮನದ ತಮವನ್ನು ಕಳೆದು ಜ್ಞಾನ ದೀಪ್ತಿಯನ್ನುಂಟಾಗಿಸಲಿ ಎಂದು ಹಾರೈಸುವ.

ಅಸತ್ತಿನಿಂದ ಸತ್ತಿನೆಡೆಗೆ ಕತ್ತಲಿಂದ ಬೆಳಕಿನೆಡೆಗೆ<br>
ಮೃತ್ಯುವಿಂದ ಅಮೃತದೆಡೆಗೆ ಬಾಳು ಹರಿಯಲಿ ಸೊಗವು ಬೆಳೆಯಲಿ

# ಶ್ರೀಸೂಕ್ತೋಪಾಸನೆ

---ಯೋಗಾಚಾರ್ಯ ಕೆ. ಕೇಶವಮೂರ್ತಿ.

ಸಿದ್ಧಲಕ್ಷ್ಮೀರ್ಮೋಕ್ಷ ಲಕ್ಷ್ಮೀ
ರ್ಜಯಲಕ್ಷ್ಮೀಃ ಸರಸ್ವತೀ
ಶ್ರೀಲಕ್ಷ್ಮೀರ್ವರಲಕ್ಷ್ಮೀಶ್ಚ
ಪ್ರಸನ್ನಾಭವ ಸರ್ವದಾ

--ಶ್ರೀಸೂಕ್ತ.

ಸಿದ್ಧಲಕ್ಷ್ಮಿ ಮೋಕ್ಷಲಕ್ಷ್ಮಿ ಜಯಲಕ್ಷ್ಮಿ ವಿದ್ಯಾಲಕ್ಷ್ಮಿ ಧನಲಕ್ಷ್ಮಿ ಮತ್ತು ವರಮಹಾಲಕ್ಷ್ಮಿಯರು ಯಾವಾಗಲೂ ನನಗೆ ಪ್ರಸನ್ನರಾಗಿರಲಿ.

ಶ್ರೀ ಎಂದರೆ ಲಕ್ಷ್ಮಿ ಲಕ್ಷ್ಮಿಗೆ ಸಂಬಂಧಿಸಿದ ವೇದೋಕ್ತ ಸೂಕ್ತವೇ ಶ್ರೀಸೂಕ್ತ. ಇದು ಋಗ್ವೇದ ಸಂಹಿತೆಯ ನಾಲ್ಕನೇ ಅಷ್ಟಕದ ಹನ್ನೊಂದನೇ ಪರಿಶಿಷ್ಟಸೂಕ್ತ. "ಹಿರಣ್ಯವರ್ಣಾಂ ಹರಿಣೀಂ ಸುವರ್ಣ ರಜತಸ್ರಜಾಮ್" ಎಂದು ಆರಂಭವಾಗುತ್ತದೆ. ಆರಂಭವೇ ಆ ಸೂಕ್ತದ ಭವ್ಯತೆಯನ್ನು ಸೂಚಿಸುತ್ತದೆ. ಚಿನ್ನ ಮತ್ತು ಬೆಳ್ಳಿಗಳಿಗೆ ಅಧಿದೇವತೆಯಾದ ಚಿನ್ನದ ಬಣ್ಣದಂತೆ ಕಾಂತಿಯುಕ್ತಳಾಗಿರುವ ಹರಿಣಿಯಿಂದ ಮಂತ್ರದ ಆರಂಭ. ಆರಂಭವೇ ನಮ್ಮನ್ನು ಪುಳಕಿತರನ್ನಾಗಿ ಮಾಡುತ್ತದೆ. ಹೀಗೆ ಭವ್ಯತೆಯಿಂದ ಆರಂಭವಾದ ಸೂಕ್ತ. "ಶ್ರಿಯಃ ಪಂಚದಶರ್ಚಂ ಚ ಶ್ರೀ ಕಾಮಸ್ಸತತಂ ಜಪೇತ್" ಎಂಬ ೧೬ನೇ ಮಂತ್ರದಿಂದ ದಿವ್ಯವಾಗಿ ಮುಕ್ತಾಯವಾಗುತ್ತದೆ. ಇದು ಈ ಮಂತ್ರಫಲಸ್ತುತಿ. ಈ ಹದಿನಾರು ಮಂತ್ರಗಳನ್ನುವ ಮೂರು ವರ್ಗಗಳನ್ನಾಗಿ ವಿಂಗಡಿಸಿದ್ದಾರೆ. ಇನ್ನುಳಿದ ೧೮ ಮಂತ್ರಗಳನ್ನು ಮತ್ತೆ ಮೂರು ವರ್ಗ ಮಾಡಿದ್ದಾರೆ. ಇಡೀ ಮಂತ್ರವೇ ಶ್ರೀದೇವಿಯ ಸೂಕ್ತವಾಗಿದೆ. ಈ ಹದಿನೆಂಟು ಮಂತ್ರಗಳಲ್ಲಿ ಸ್ತೋತ್ರಗಳೂ ಸೇರಿವೆ. ಇವುಗಳಿಗೆ ಸ್ವರವಿರುವುದಿಲ್ಲ.

ಶ್ರೀಸೂಕ್ತವನ್ನು ಹೇಳಿಕೊಂಡು ದೇವಿಗೆ ಅಭಿಷೇಕ ಮಾಡುವುದರಿಂದ ದೇವಿಯು ಸುಪ್ರೀತಳಾಗುತ್ತಾಳೆ. ಶ್ರೀಸೂಕ್ತವನ್ನು ಹನ್ನೆರಡು ಬಾರಿ ಪಠಿಸಿದರೆ ದ್ವಾದಶಿನಿ; ೧೫ ಬಾರಿ ಪಠಿಸಿದರೆ ಪಂಚದಶಿನಿ; ಹದಿನಾರು ಬಾರಿ ಪಠಿಸಿದರೆ ಷೊಡಶಿನಿ ಆವೃತ್ತಿಯಾಗುತ್ತದೆ. 'ಅಧಿಕಸ್ಯ ಅಧಿಕಂ ಫಲಂ' ಎಂಬಂತೆ ಎಷ್ಟೆಷ್ಟು ಬಾರಿ ಪಠಿಸಿದರೆ ಅಷ್ಟಷ್ಟು ಪುಣ್ಯಪ್ರಾಪ್ತಿಯಾಗುತ್ತದೆ.

ಶ್ರೀಸೂಕ್ತ ಪಾರಾಯಣವು ಶೀಘ್ರಫಲಕಾರಿ. 'ಸ ಪ್ರತ್ಯಯಂ ಮಯಾಪ್ರೋಕ್ತಂ' ಎಂದು ಪ್ರಾಚೀನ ಋಷಿ ವಚನವಿದೆ. ಶ್ರೀಸೂಕ್ತವು ಮುಖ್ಯವಾಗಿ ಸಂಪತ್ತನ್ನೂ ಸಕಲೈಶ್ವರ್ಯವನ್ನೂ ದೊರಕಿಸಿಕೊಡುವ ಮಂತ್ರ. ಆದಕಾರಣ ಇದೊಂದು ಉಪಾಸನೆ. 'ಉಪಸ್ಯ ಯೋ ಆಸನಂ ಉಪಾಸನಮ್' ಎಂಬ ಉಕ್ತಿಯಂತೆ ನಮ್ಮ ಆರಾಧ್ಯದೈವವನ್ನು ನಾವು ಸಮೀಪಿಸುವುದೇ ಉಪಾಸನೆ. ಶ್ರೀಸೂಕ್ತದಲ್ಲಿ ಶ್ರೀ ಲಕ್ಷ್ಮಿಯೇ ನಮ್ಮ ಉಪಾಸನಾದೇವತೆ. ಲಕ್ಷ್ಮಿಯು ಧನ ಧಾನ್ಯಗಳ, ಅಷ್ಟೈಶ್ವರ್ಯಗಳ ಅಧಿದೇವತೆ. "ಕ್ಷುತ್ಪಿಪಾಸಾಮಲಾಂ ಜ್ಯೇಷ್ಠಾಮಲಕ್ಷ್ಮೀಂ ನಾಶಯಾಮ್ಯಹಮ್" ಎಂಬ ೮ನೇ ಮಂತ್ರದಲ್ಲಿ ದೇವಿಯು ದಾರಿದ್ರ್ಯವನ್ನು ನಾಶಮಾಡುತ್ತಾಳೆ ಎಂದಿದೆ.

ಶ್ರೀಸೂಕ್ತದಲ್ಲಿ ಲಕ್ಷ್ಮಿಯ ಅಮೋಘವಾದ ಶ್ರೇಷ್ಠ ವೈಭವದ, ಅದ್ವಿತೀಯ ಸಾಮರ್ಥ್ಯದ ಪೂರ್ಣವರ್ಣನೆಯಿದೆ. ಹೋಮಹವನಗಳಿಗೆ, ಜಪಕ್ಕೆ, ಪಾರಾಯಣಕ್ಕೆ, ಅರ್ಚನೆಗೆ ಶ್ರೀಸೂಕ್ತವನ್ನು ಯಥಾವಿಧಿಯಾಗಿ ಬಳಸುತ್ತಾರೆ. ಇದು ತಾಯಿಯ ಬಳಿ ಪ್ರಾರ್ಥನೆ. ತಾಯಿಯನ್ನು ಪ್ರಾರ್ಥಿಸಿ ಶರಣು ಹೋದಾಗ ಯಾವುದೇ ಮನೋಭೀಷ್ಟ ಕೇಳಿದರೂ ಮಾತೆ ಇಲ್ಲವೆನ್ನುವುದಿಲ್ಲ. ಕಾರಣ ಅವಳದು ಮಾತೃಹೃದಯ, ಪುತ್ರವಾತ್ಸಲ್ಯದಿಂದ ತನ್ನ ಭಕ್ತನಿಗೆ ಸಮಸ್ತವನ್ನೂ ಅನುಗ್ರಹಿಸುವ ದಾತೆ ಅವಳು. ಆದ್ದರಿಂದಲೇ ಋಷಿಯ ಪ್ರಾರ್ಥನೆ ಹೀಗಿದೆ.

ಪುತ್ರಪೌತ್ರಧನಂ ಧಾನ್ಯಂ
ಹಸ್ತ್ಯಶ್ವಾದಿ ಗವೇ ರಥಮ್
ಪ್ರಜಾನಾಂ ಭವಸಿ ಮಾತಾ
ಆಯುಷ್ಮಂತಂ ಕರೋತು ಮಾಮ್

ಕೊಡುವ ದೇವಿಗೆ ಕೊನೆಮೊದಲೆಂಬುದೇ ಇಲ್ಲ. ನಮಗೆ ದೇಕಾದ ಮಕ್ಕಳು, ಮೊಮ್ಮೊಕ್ಕಳ ಸಂಪತ್ತು, ಧನ್ಯಧಾನ್ಯಗಳು, ಆನೆ, ಕುದುರೆ, ಹಸು ರಥಗಳು (ಇವು ರಾಜರಿಗೆ) ಹಾಗೂ ಆಯುಷ್ಯ ಇವೆಲ್ಲವನ್ನೂ ದೇವಿ ಅನುಗ್ರಹಿಸುತ್ತಾಳೆ. ಲಕ್ಷ್ಮಿಯ ಕೃಪೆಗೆ ಪಾತ್ರನಾದವನಿಗೆ ಯಾವುದಕ್ಕೆ ತಾನೆ ಬಡತನ!

ಶ್ರೀಸೂಕ್ತದ ಪ್ರತ್ಯೇಕ ಯಂತ್ರಗಳೂ ಇದೆ. ತಾಮ್ರದ ಶ್ರೀಸೂಕ್ತಯಂತ್ರವನ್ನು (ಇದು ಶ್ರೀಚಕ್ರವಲ್ಲ) ಪ್ರಾಣಪ್ರತಿಷ್ಠಾಪನೆ ಮಾಡಿ ಲಕ್ಷ್ಮೀಸಹಸ್ರನಾಮಾವಳಿಯಿಂದ ನಿತ್ಯಪೂಜೆ ಮಾಡಿದರೆ ಸಮಸ್ತ ಅನಿಷ್ಟಗಳೂ ಅರಿಷ್ಟಗಳೂ ದೂರವಾಗುತ್ತವೆ. ಶ್ರೀಸೂಕ್ತದ ನಿತ್ಯಪಾರಾಯಣದಿಂದ ದುಃಖ ನಿವಾರಣೆಯಾಗಿ ಸುಖವು ಪ್ರಾಪ್ತಿಯಾಗುತ್ತವೆ. ೧೫ ಋಚಾಗಳ ಶ್ರೀಸೂಕ್ತವನ್ನು ೧೦೮ ಬಾರಿ ಪಠಿಸಿ, ಉಳಿದ ಮಂತ್ರಗಳನ್ನು ಒಮ್ಮೆ ಪಾರಾಯಣ ಮಾಡಿದರೆ ಸಾಮಾನ್ಯ ಅಡಚಣೆಗಳು ನಿವಾರಣೆಯಾಗುತ್ತದೆ.

ವಿವಿಧೈಶ್ವರ್ಯ ಪ್ರಾಪ್ತಿಗಾಗಿ ಶ್ರೀ ಲಕ್ಷ್ಮಿಯ ಕೃಪೆಗಾಗಿ ಪ್ರತಿದಿನ ೧೦-೧೨- ೧೫ ಬಾರಿ ಶ್ರೀಸೂಕ್ತವನ್ನು ವಿಧಿವತ್ತಾಗಿ ಜಪಿಸಿ ಕಡೆಯಲ್ಲಿ ಶ್ರೀಸೂಕ್ತದ ಆಜ್ಯಹೋಮವನ್ನು ಮಾಡಬೇಕು. ಶ್ರೀಸೂಕ್ತದ ದಶಾವೃತ್ತಿ, ದ್ವಾದಶಾವೃತ್ತಿ, ಪಂಚದಶವೃತ್ತಿ ಅಭಿಷೇಕ ಮಾಡಿದರೆ ಲಕ್ಷ್ಮಿಯು ಸ್ಥಿರವಾಗಿ ನಿಲ್ಲುತ್ತಾಳೆ. – ಲಕ್ಷ್ಮಿಯು ಸ್ಥಿರವಾಗಿ ನಿಲ್ಲುತ್ತಾಳೆ ಎಂದು ಹೇಳುವುದರಲ್ಲಿ ತುಂಬಾ ಔಚಿತ್ಯವಿದೆ. ಕಾರಣ "ಚಪಳೆ ಸೊಡರ ಕುಡಿಯಂ ಪೋಲ್ವಳ್" ಎಂದು ಹೇಳಿರುವ ನಾಗವರ್ಮನ ಮಾತು ಅಕ್ಷರಶಃ ಸತ್ಯ. ಲಕ್ಷ್ಮಿಯೇ ತಾನು ಚಂಚಲೆ ಎಂಬುದನ್ನು ಸ್ವಯಂ ಸ್ಪಷ್ಟಪಡಿಸಿದ್ದಾಳೆ.

ಶೂರಂ ತ್ಯಜಾಮಿ ವೈಧವ್ಯಾತ್
ಉದಾರಂ ಲಜ್ಜಯಾ ಪುನಃ
ಸಪತ್ನ್ಯಾತ್ಪಂಡಿತಮಪಿ
ತಸ್ಮಾತ್ಕೃಪಣಮಾಶ್ರಯೇ



*ತಿರುಮಲೆ – ತಿರುಪತಿ ದೇವಸ್ಥಾನಗಳು*

## ಅಭಿಷೇಕ ಸೇವೆಗಳು

ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತ ಪರಿಧಿಯ ಆರು ದೇವಾಲಯಗಳಲ್ಲಿ ವಾರಕ್ಕೆ ಒಮ್ಮೆ ನಡೆಯುವ ಅಭಿಷೇಕ ಸಮಯದಲ್ಲಿ ಭಕ್ತರು ಒಬ್ಬರಿಗೆ ೫ ರೂಪಾಯಿನಂತೆ ಶುಲ್ಕ ನೀಡಿ ಅಭಿಷೇಕ ದರ್ಶನ ಹೊಂದಬಹುದು. ವಿವಿಧೆಡೆಗಳಲ್ಲಿರುವ ಈ ದೇವಾಲಯಗಳೆಂದರೆ---

1. ಶ್ರೀ ವೇದನಾರಾಯಣಸ್ವಾಮಿ ಆಲಯ
--ನಾಗುಲಾಪುರಂ.

2. ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಆಲಯ
--ನಾರಾಯಣವನಂ.

3. ಶ್ರೀ ವೇಣುಗೋಪಾಲಸ್ವಾಮಿ ಆಲಯ
--ಕಾರ್ವೇಟಿನಗರ.

4. ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ಆಲಯ
--ಅಪ್ಪಲಾಯಗುಂಟ.

5. ಶ್ರೀ ವೆಂಕಟೇಶ್ವರಸ್ವಾಮಿ ಆಲಯ
--ಶ್ರೀನಿವಾಸಮಂಗಾಪುರ.

6. ಆಲಯಸಮುದಾಯ --ಹೃಷೀಕೇಶ.

ಭಕ್ತ ಯಾತ್ರಿಕರು ಈ ವಿಶೇಷ ಸೇವೆಯನ್ನು ದರ್ಶಿಸಬೇಕೆಂದು ವಿನಂತಿಸಲಾಗಿದೆ.

**ತಿ. ತಿ. ದೇವಸ್ಥಾನಗಳು,**
ತಿರುಪತಿ.

ಯುದ್ಧವೀರನು ಯುದ್ಧದಲ್ಲಿ ಮಡಿಯುವನೆಂದೂ ತನಗೆ ವೈಧವ್ಯವು ಪ್ರಾಪ್ತವಾಗುವುದೆಂದೂ ಶೂರನ ಬಳಿ ಲಕ್ಷ್ಮಿ ಇರಬಯಸುವುದಿಲ್ಲ. ದಾನಿಯು ತನ್ನನ್ನು ಇತರರಿಗೆ ದಾನ ಮಾಡುವುದರಿಂದ ನಾಚಿಕೆಯಾಗುತ್ತದಂತೆ. ಆದಕಾರಣ ದಾನಿಯ ಬಳಿ ನಿಲ್ಲುವುದಿಲ್ಲವಂತೆ. ವಿದ್ವಾಂಸನ ಬಳಿ ತನ್ನ ಸವತಿಯಾದ ಸರಸ್ವತಿಯು ಇರುವುದರಿಂದ ಅಲ್ಲಿ ಸವತಿಕಾಟವಂತೆ. ಅಲ್ಲಿಯೂ ನೆಲೆಸುವುದಿಲ್ಲವಂತೆ. ಲೋಭಿಯಲ್ಲಿ ಈ ಯಾವಗುಣವೂ ಇಲ್ಲದಿರುವುದರಿಂದ ಅವನಲ್ಲಿರುತ್ತೇನೆ ಎನ್ನುತ್ತಾಳೆ ಲಕ್ಷ್ಮಿ. ಇಂದು ಕೇವಲ ಕೃಪಣನಿಂದೆಗಾಗಿ ಹೇಳಿರುವ ಶ್ಲೋಕವಾದರೂ ಲಕ್ಷ್ಮಿಸ್ಥಿರವಾಗಿ ಒಬ್ಬನಲ್ಲಿ ನಿಲ್ಲಲಾರಳೆಂಬುದನ್ನು ಅಲಂಕಾರಿಕವಾಗಿ ಸ್ಪಷ್ಟಪಡಿಸುತ್ತದೆ. ಆದಕಾರಣ ಪುನಃ ಪುನಃ ಶ್ರೀಸೂಕ್ತವನ್ನು ಶ್ರದ್ಧಾಭಕ್ತಿಗಳಿಂದ ಪಠಿಸಿದರೆ ಲಕ್ಷ್ಮಿಯು ಸ್ಥಿರವಾಗಿ ನಿಲ್ಲುತ್ತಾಳೆ. ಅಷ್ಟೇ ಅಲ್ಲ. ಶ್ರೀಸೂಕ್ತವನ್ನು ೧೦೦, ೧೦೮, ೧೦೦೦, ೧೨೦೦೦ ಆವೃತ್ತಿ ಜಪಿಸಿದರೆ ಸಾಂಸಾರಿಕ ಕ್ಲೇಶಗಳು ಇಲ್ಲವಾಗುತ್ತವೆ.

ನ ಕ್ರೋಧೋ ನ ಚ ಮಾತ್ಸರ್ಯಂ
ನ ಲೋಭೋ ನಾಶುಭಾಮತಿಃ
ಭವಂತಿ ಕೃತಪುಣ್ಯಾನಾಂ ಭಕ್ತಾನಾಂ
ಶ್ರೀಸೂಕ್ತಂ ಜಪೇತ್ಸದಾ

ಶ್ರೀಸೂಕ್ತ ಕೇವಲ ಧನಪ್ರಾಪ್ತಿಗಾಗಿಯೇ ಅಲ್ಲ. ಕೋಪ, ಹೊಟ್ಟೆಕಿಚ್ಚು, ಜಿಪುಣತನ, ದುರ್ಬುದ್ಧಿಗಳು ಶ್ರೀಸೂಕ್ತದ ಸತತ ಪಾರಾಯಣದಿಂದ ನಾಶವಾಗಿ ಭಕ್ತನು ಪುಣ್ಯಾಯುವಾಗುತ್ತಾನೆ. ಇಂತಹ ಲಕ್ಷ್ಮಿಯು ನನ್ನ ಮನೆಯಲ್ಲಿ ನೆಲಸಲಿ ಎಂಬುದು ಋಷಿಯ ಪ್ರಾರ್ಥನೆ.

ಲಕ್ಷ್ಮೀರ್ದಿವ್ಯೈರ್ಗಜೇಂದ್ರೈರ್ಮಣಿಗಣ
ಖಚಿತೈಃ ಸ್ನಾಪಿತಾ ಹೇಮಕುಂಭೈಃ
ನಿತ್ಯಂ ಸಾ ಪದ್ಮಹಸ್ತಾ ವಸತು
ಮಮ ಗೃಹೇ ಸರ್ವಮಾಂಗಲ್ಯಯುಕ್ತಾ

ಶ್ರೀಸೂಕ್ತದ ನಿತ್ಯ ಹವನ ಕ್ರಮವೂ ಇದೆ. ಇದರಲ್ಲಿ ಶುಕ್ರವಾರ ಅಷ್ಟಮಿ, ಶುಕ್ರವಾರ ಚತುರ್ದಶಿಗಳು ಬಂದಾಗ ಮೂರು ಆವೃತ್ತಿ ಹೋಮ ಮಾಡಬೇಕು. ಒಂದು ವೇಳೆ ನಿತ್ಯಹವನ ಸಾಧ್ಯವಿಲ್ಲದಿದ್ದರೆ ಪ್ರತಿ ಶುಕ್ರವಾರ ತುಪ್ಪದಿಂದ ಶ್ರೀಸೂಕ್ತ ಹೋಮ ಮಾಡಬೇಕು. ಹೀಗೆ ಮಾಡುವುದರಿಂದ ಲಕ್ಷ್ಮಿಯು ಪ್ರಸನ್ನಳಾಗುತ್ತಾಳೆ.

ಶ್ರೀ ವರ್ಚಸ್ವಮಾಯುಷ್ಯಮಾರೋಗ್ಯ
ಮಾವಿಧಾತ್ಪವಮಾನಂ ಮಹೀಯತೇ
ಧನಂ ಧಾನ್ಯಂ ಪಶುಂ ಬಹುಪುತ್ರಲಾಭಂ
ಶತಸಂವತ್ಸರಂ ದೀರ್ಘಮಾಯುಃ

ಪ್ರಸನ್ನಳಾದ ಶ್ರೀದೇವಿಯು ಐಶ್ವರ್ಯ, ತೇಜಸ್ಸು, ಆರೋಗ್ಯ ಧನ, ಧಾನ್ಯ ಪಶು ಸಂಪತ್ತು, ಅನೇಕ ಮಂದಿ ಗಂಡು ಸಂತಾನ, ನೂರು ವರ್ಷದ ದೀರ್ಘಾಯುಷ್ಯ ಇವುಗಳನ್ನು ಕರುಣಿಸುತ್ತಾಳೆ. ಅಷ್ಟೇ ಅಲ್ಲ;

ಋಣರೋಗಾದಿ ದಾರಿದ್ರ್ಯ
ಪಾಪಕ್ಷುದಪಮೃತ್ಯವಃ
ಭಯಶೋಕ ಮನಸ್ತಾಪಾ
ನಶ್ಯಂತು ಮಮ ಸರ್ವದಾ

ಸಾಲ, ರೋಗ, ಬಡತನ, ಪಾಪ, ಹಸಿವು, ಅಪಮೃತ್ಯು, ಭಯ, ದುಃಖ, ಮನಸ್ತಾಪಗಳು ನಶಿಸಿ ಸಾಧಕನು ನೆಮ್ಮದಿಯಿಂದ ಬಾಳುತ್ತಾನೆ.

ಇಡೀ ಶ್ರೀಸೂಕ್ತದ ಹದಿನೈದು ಮಂತ್ರಗಳನ್ನೂ ಜಪಮಾಡಲು ಸಾಧ್ಯವಾಗದಿದಲ್ಲಿ ಉದ್ದೇಶಕ್ಕನುಗುಣವಾಗಿ ಕೆಲವು ಮಂತ್ರಗಳನ್ನು ಜಪಿಸಬಹುದು.

ಹೀಗೆ ಶ್ರೀಸೂಕ್ತೋಪಾಸನೆಯು ಐಹಿಕವಾದ ಸಮಸ್ತ ಕಾಮನೆಗಳನ್ನೂ ಪೂರೈಸುವ ಕಾಮಧೇನುವಾಗಿದೆ. ಇದೇ ಉಪಾಸನೆಯನ್ನು ಪ್ರತಿಫಲಾಪೇಕ್ಷೆಯಿಲ್ಲದೆ ಮಾಡಿದರೆ ಮೋಕ್ಷವು ಲಭಿಸುತ್ತದೆ. ಕಾರಣ ಅವಳು ಮೋಕ್ಷಲಕ್ಷ್ಮಿಯೂ ಹೌದು.

ಶ್ರೀಸೂಕ್ತವು ಹಲವಾರು ಲೌಕಿಕ ವಿಜ್ಞಾನದ ಅಂಶಗಳಿಂದ ತುಂಬಿದೆ. ಆರ್ದ್ರಾಂ, ಪದ್ಮವರ್ಣ - ಈ ಶಬ್ದಗಳಲ್ಲಿ ವೈಜ್ಞಾನಿಕಾಂಶಗಳಿವೆ. 'ಯಃ ಕರಿಣೀಂ ಯಷ್ಟಿಂ' ಪದದಲ್ಲಿ ವ್ಯಾವಹಾರಿಕ ವಿಜ್ಞಾನವಿದೆ. 'ವೃಕ್ಷೋಥ ಬಿಲ್ವ'ದಲ್ಲಿಯ ಬಿಲ್ವದ ಮಹಿಮೆಯು ವಿಜ್ಞಾನಯುಕ್ತವಾಗಿದೆ.

ಒಬ್ಬನಲ್ಲಿ ಐಹಿಕಾಮುಷ್ಮಿಕ ಅಭ್ಯುದಯ ಶ್ರೀಸೂಕ್ತದ ಶ್ರದ್ಧಾಭಕ್ತ್ಯುಪಾಸನೆಯಿಂದ ಕೈಗೂಡುತ್ತದೆಂಬುದರಲ್ಲಿ ಯಾವ ಸಂಶಯವೂ ಇಲ್ಲ.

ಎಚ್ಚರಿಕೆ:-- ಕಡೆಯಮಾತು. ಶ್ರೀಸೂಕ್ತ ವೇದೋಕ್ತವಾದುದರಿಂದ ಅದನ್ನು ಸ್ವರಪೂರ್ಣವಾಗಿಯೇ ಉಚ್ಚರಿಸಬೇಕು. ವೇದಜ್ಞರ ಬಳಿ ಅಧ್ಯಯನ ಮಾಡಿ, ಅರಿಷಡ್ವರ್ಗಗಳಿಂದ ಮುಕ್ತನಾದ ಗುರುವಿನ ಬಳಿ ಮಂತ್ರೋಪದೇಶ ಪಡೆದ ನಂತರವೆ ಜಪಿಸಬೇಕು. ಇಲ್ಲದಿದ್ದಲ್ಲಿ 'ಇಂದ್ರಶತ್ರುರ್ವರ್ಧಸ್ವ' ಎಂದು ದಿತಿಯು ಹೇಳಿ ದುಷ್ಫಲವನ್ನು ಪಡೆದಂತಾಗುತ್ತದೆ.

ಓಂ ಮಹಾಲಕ್ಷ್ಮೀ ಚ ವಿದ್ಮಹೇ
ವಿಷ್ಣುಪತ್ನೀ ಚ ಧೀಮಹಿ
ತನ್ನೋ ಲಕ್ಷ್ಮೀಃ ಪ್ರಚೋದಯಾತ್



# ಜಗನ್ನಾಟಕ

---ಸಿ. ಗೋವಿಂದಾಚಾರ್.



ಭಗವಂತನ ಶಕ್ತಿ ಹಾಗೂ ಮಹಿಮೆ ವಿಧವಿಧವಾಗಿ ಹೊರತೋರಿಕೊಂಡಿರುವುದಕ್ಕೆ ವಿಭೂತಿ ಎಂದು ಹೆಸರು. ಇದನ್ನೇ ಸಾಮಾನ್ಯಭಾಷೆಯಲ್ಲಿ ಲೀಲೆ, ಜಗನ್ನಾಟಕ ಎಂದೂ ಕರೆಯುವುದುಂಟು. ವಿಶ್ವವೇ ಒಂದು ರಂಗಸ್ಥಳ ಭಗವಂತನೇ ಕ್ರೀಡಾನಟ. ಲೋಕೋದ್ಧಾರಕ್ಕಾಗಿ ಭಗವಂತನು ಶ್ರೀದೇವಿಯೊದಿಗೆ ವಿವಿಧ ವೇಷಗಳಲ್ಲಿ ಅವತರಿಸುವನು, ನಟನೆಮಾಡುವನು. ಈ ಅದ್ಭುತ ಭೂಮಿಕೆಗಳಿಂದ ಅವನ ಲೀಲಾಚೇಷ್ಟಿತಗಳೆಲ್ಲವೂ ರಸಮಯವಾಗುವುದು. ಸಾಧುಪರಿತ್ರಾಣಕ್ಕಾಗಿ ಕೃಷ್ಣಲೀಲೆ ಪಾಂಡವ-ಕೌರವ ಸಮರ, ಭಗವದ್ಗೀತೆ, ರಾಮಾಯಣವೆಂಬ ನರನಾಟಕ ಇನ್ನೂ ಮುಂತಾದ ಅದ್ಭುತ ಸಾಧನ - ಮಾಧ್ಯಮಗಳನ್ನು ಅಳವಡಿಸಿದ್ದಾನೆ. ಆದರೂ ಲೋಕದಲ್ಲಿ ಮೋಹಾಂಧತೆ, ಅಜ್ಞಾನ ತಾಂಡವಾಡುತಿದ್ದುದರಿಂದ ತನಗಿಂತಲೂ ಉತ್ಕರ್ಷವನ್ನು ಪಡೆದಿರುವ ತನ್ನ ಭಕ್ತರಿಂದಲೇ ಈ ಅಜ್ಞಾನ ನಿವಾರಣೆಯ ಕಾರ್ಯವನ್ನು ನೆರವೇರಿಸಲು ಸಂಕಲ್ಪಿಸಿ ಅದಕ್ಕೆ ತಕ್ಕಂಥಾ ಭೂಮಿಕೆಗಳನ್ನು ಸಿದ್ಧಪಡಿಸಿಕೊಂಡ. ತನ್ನ ಅಂತರಂಗ ಭಕ್ತರನ್ನು ಭೂಲೋಕದಲ್ಲಿ ಅವತರಿಸಲು ಸಂಕಲ್ಪಿಸಿದ. ಭಗವದವತಾರಗಳಂತೆಯೇ ವಿವಿದ ಹಂತಗಳಲ್ಲಿ ಕಾಲಗಳಲ್ಲಿ ಚೇತನೋದ್ಧಾರಕ್ಕಾಗಿ ಸಂತ ಶ್ರೇಷ್ಠರ ಅವತಾರವಾಯಿತು. ಅಯೋನಿಜರು ಹಾಗೂ ಪುಷ್ಪಜಾತರಾದ ಮೊದಲಾಳ್ವಾರುಗಳಾದ ಪೊಯ್ಗೈ, ಪೂದತ್ತಾಳ್ವಾರ್ ಮತ್ತು ಪೇಯಾಳ್ವಾರ್ ಹುಟ್ಟಿನಲ್ಲೇ ಜ್ಞಾನವೈರಾಗ್ಯ ಸಂಪನ್ನರು. ಭಗವತ್ಪ್ರಸಾದದಿಂದಲೇ ಉಂಟಾದ ಭಗವದ್ರಸವೇ ತಮಗೆ ಜೀವನವೆಂದೂ, 'ಭಜಿಸಿ ಬದುಕು' ಎಂದು ಸಾರಿಕೊಂಡೇ ಕ್ಷೇತ್ರಾಟನೆ ಮಾಡುತ್ತಿದ್ದರು. 'ಭಕ್ತರೆಲ್ಲಿರುವರೋ ಅಲ್ಲಿ ನಾನೂ' ಎಂದು ಅವನೇ ಹೇಳಿರುವಂತೆ, ಭಗವಂತನು ಈ ಮೂವರನ್ನು ಒಂದೆಡೆ ಸೇರಿಸಿ ತಾನೂ ಅವರೊಡನೆ ಬೆರೆತು ಅವರನ್ನೂ ಅವರ ಮಹಿಮೆಯನ್ನೂ ಲೋಕಕ್ಕೆಲ್ಲಾ ಪ್ರಚಾರಪಡಿಸಲು ಒಂದು ಜಗಲಿ ನಾಟಕವಾಡಿದ.

ದಿವ್ಯದೃಶ್ಯ : ಈ ಸಂತರು ಒಮ್ಮೆ ಒಂದು ಗ್ರಾಮದತ್ತ (ಇಂದಿನ ತಿರುಕೋಯಿಲೂರ್ ಕ್ಷೇತ್ರ) ಬರುತ್ತಿದ್ದರು. ಸಂಜೆವೇಳೆಯಾಗಿತ್ತು. ಎಲ್ಲೆಲ್ಲೂ ಮೋಡ ಕವಿದ ವಾತಾವರಣದಿಂದ ಕತ್ತಲು ಹರಡುತ್ತಿತ್ತು ಜೋರಾದ ಮಳೆ ಬಂದೇ ಬಂತು. ಮಳೆಯಲ್ಲಿ ನೆನೆಯುತ್ತಿದ್ದ ಆಳ್ವಾರುಗಳು ಒಬ್ಬೊಬ್ಬರಾಗಿ ಬಂದು ಇಕ್ಕಟ್ಟಾದ ಜಗಲಿ ಸೇರಿದರು. ದೀರ್ಘದಂಡ ನಮಸ್ಕಾರಮಾಡಲು ಜಾಗವಿಲ್ಲದ್ದರಿಂದ ಪರಸ್ಪರ ಅಂಜಲಿಯೊಂದಿಗೆ ತಾವು ಭಾಗವತರು ಎಂದು ಪರಿಚಯ ಮಾಡಿಕೊಂಡರು. ಎಲ್ಲೆಲ್ಲೂ ಕತ್ತಲು ಆವರಿಸಿತ್ತು. ಇದ್ದಕ್ಕಿದ್ದಂತೆಯೇ ಹೊಸ ವ್ಯಕ್ತಿಯೊಬ್ಬ ಮೂವರ ಮಧ್ಯೆ ತೂರಿಬಂದ. ಇಕ್ಕಟ್ಟಿನಲ್ಲಿ ಇವನಾರಪ್ಪಾ ಎಂದು ತಮ್ಮಲ್ಲೇ ಪ್ರಶ್ನಿಸುವುದರೊಳಗೇ ಸ್ಪರ್ಶ ಮಹಿಮೆಯಿಂದಲೋ ಏನೋ ಮೂವರು ತಮ್ಮ ಜ್ಞಾನ ಚಕ್ಷುವಿನಿಂದ ಬಂದವನು ದೇರಾರೂ ಆಗಿರದೆ ತ್ರಿವಿಕ್ರಮ ರೂಪದ ಸಾಕ್ಷಾತ್ ಭಗವಂತನೇ ಎಂದು ತಿಳಿದು ಅನುಪಮವಾಗಿ ಸ್ತುತಿಸಲಾರಂಭಿಸಿದರು. ಅವರಲ್ಲಿದ್ದ ಪರಭಕ್ತಿ ವಿಕಾಸಗೊಂಡಿತು. ಅನಂತರ ಭಗವಂತನ ವಿಭವರೂಪ ಅದೃಶ್ಯವಾಗಿ 'ದಾರುಭೂತೋ ಮುರಾರಿ' ಎಂಬಂತೆ ತ್ರಿವಿಕ್ರಮನು ದಾರುಮೂರ್ತಿಯಾಗಿ ಅಲ್ಲೇ ನೆಲಸಿದ. ಇದೇ ಸಮಯಕ್ಕೆ ಮೃಕಂಡು ಮುನಿ ದಂಪತಿಗಳು ಅಲ್ಲಿಗೆ ಬಂದು ಅಂಜಲಿ ಸಮರ್ಪಿಸಿದರು. ಇಲ್ಲಿಗೆ ದೃಶ್ಯ ಮುಗಿಯಿತು.

ಪರಿಣಾಮ : ಪ್ರಾಕೃತ ದರ್ಶನದಿಂದ ಭಕ್ತಿ ಗಾಢವಾಗಿ ಆಳ್ವಾರರು ಆ ಭಗವದ್ರಸವನ್ನು ತಮ್ಮಲ್ಲಿಯೇ ಅಡಗಿಸಿಕೊಳ್ಳಲಾಗದೆ ಅದನ್ನು ಪ್ರಬಂಧರೂಪದಲ್ಲಿ ಚಿತ್ರಿಸಿದರು. ಭಗವಂತನೇ ಕಬ್ಬು ಆಳ್ವಾರರು ಯಂತ್ರ - ಹಿಂಡಲ್ಪಟ್ಟ ಕಬ್ಬಿನ ರಸ ಹೆಪ್ಪುಗಟ್ಟಿ ದಿವ್ಯಪ್ರಬಂಧವೆಂಬ ಕಲ್ಲು ಸಕ್ಕರೆ ಆಯಿತು ಎಂದು ದೇಶಿಕರು ದೇಹಳೀಶಸ್ತುತಿಯಲ್ಲಿ ಈ ನಾಟಕೋತ್ತರ ಪ್ರಸಂಗವನ್ನು ವಿವರಿಸಿದ್ದಾರೆ. ಈ ನಾಟಕದಿಂದ ದಿವ್ಯಪ್ರಬಂಧದ ಅವತಾರವಾದ್ದಲ್ಲದೇ ಶ್ರೀ ವೈಷ್ಣವ ಧರ್ಮದ ಪುನರುಜ್ಜೀವನಕ್ಕೆ ದಾರಿ ಆಯಿತು. ಪರಭಕ್ತಿ, ಪರಜ್ಞಾನ ಹಾಗೂ ಪರಮಭಕ್ತಿ - ಇವು ಭಕ್ತನಲ್ಲಿರದೇಕೆಂಬುದೇ ಈ ಆಳ್ವಾರರ ಅವತಾರ ಸಂಕೇತ. 'ತಿಳಿದೆ, ನೋಡಿದೆ, ಭಗವದನುಭವದಲ್ಲಿ ಮುಳುಗಿದೆ' ಎಂದು ಇವರುಗಳು ತಮಗಾದ ಸಾಕ್ಷಾತ್ಕಾರವಾದ ರೀತಿಯನ್ನು ವರ್ಣಿಸಿರುವುದು ಗೀತಾವಾಣಿಗೆ ಅನುಗುಣವಾಗಿಯೇ ಇವೆ. (೧೧-೫೪) ರವಿಯನ್ನೇ ಹಣತೆಯಾಗಿ ಹಚ್ಚುವರು. ಭಗವಂತನಿಗಾಗಿ ಭ್ರಾಂತರಾಗುವರು ಹುಚ್ಚರಾಗುವರು. ಇವರ ದಿವ್ಯಾನುಭವವು ಪರತತ್ವಸೂಚಕವಾದ್ದು. ಪೊಯ್ಗೈ ಹಾಗೂ ಪೂದತ್ತಾಳ್ವಾರರು (ಕ್ರಮವಾಗಿ) 'ತ್ರಿವಿಕ್ರಮ' 'ನಾರಾಯಣ' ಎಂದರು ಪೇಯಾಳ್ವಾರರೋ

ಮೊದಲ್ನೋಟದಲ್ಲೇ ವಕ್ಷಸ್ಥಳದಲ್ಲಿದ್ದ ಲಕ್ಷ್ಮಿಯನ್ನು ಕಂಡು 'ತಿರುಕಂಡೇನ್' ಎಂದು ಪ್ರಾರಂಭಿಸಿ ದಿವ್ಯ ಮಾತೆಯ ದರ್ಶನದಿಂದಲೇ ನಾನು ಶ್ರೀಪತಿಯ ದಿವ್ಯಮಂಗಳ ವಿಗ್ರಹವನ್ನು ಕಂಡೆ. ಲಕ್ಷ್ಮೀ ಸಹಿತನಾದ ನಾರಾಯಣನಲ್ಲಿ ಅದೇನು ಅಪರಿಮಿತ ತೇಜಸ್ಸು! ಎಂದು ಆಶ್ಚರ್ಯ ವ್ಯಕ್ತಪಡಿಸಿ ಪುರುಷಕಾರತ್ವವನ್ನು ವರ್ಣಿಸಿರುತ್ತಾರೆ. ದೇವನು ಅವತರಿಸುವಾಗ ದೇವಿಯೂ ಛಾಯೆಯಂತೆ ಅವನೊಡನೆ ಸಹಕರಿಸುವಳು ಎಂಬುದನ್ನು ಶ್ರೀಮದಾಳ್ವಾರರೂ ಉಲ್ಲೇಖಿಸಿರುತ್ತಾರೆ. ಭಾಗವತ ಸಂಶ್ಲೇಷದಿಂದ ತಾನೂ ಆನಂದಿಸಲು ದಯಾಸಮುದ್ರನಾದ ಭಗವಂತನು ತಾನಾಗಿಯೇ ಬಂದು ಒತ್ತಡವನ್ನು ಸಹಿಸಿಕೊಂಡು ಮೈದೋರಿರುವುದು ಅವನ ಸೌಲಭ್ಯವನ್ನೇ ಸೂಚಿಸುವುದು. ದೇಶಿಕರು ಈ ಸೌಲಭ್ಯವನ್ನು ಅನಾಯಾಸವಾಗಿ ಬುಡದಲ್ಲೇ ಫಲಕೊಡುವತಮಾಲವೃಕ್ಷಕ್ಕೆ ಹೋಲಿಸುವರು. ಆಳ್ವಾರರ ಜೊತೆಗೆ ಮೃಕಂಡು ದಂಪತಿಗಳಿಗೂ ಅನುಗ್ರಹವಾಯಿತು. ಭಕ್ತರ ಜೊತೆ ಸೇರಿ ಆನಂದಿಸುವ ಆತುರದಲ್ಲಿ ಅವನ ಶಂಖಚಕ್ರಗಳು ಅದಲು ಬದಲಾಗಿರುವುದನ್ನು ಅವನು ಗಮನಿಸಲೇ ಇಲ್ಲ. ಈ ಕ್ಷೇತ್ರದಲ್ಲಿ ಸ್ವಾಮಿ ಬಲಗಾಲನ್ನು ಎತ್ತಿದ್ದಾನೆ. ತೋರು ಬೆರಳಿನಿಂದ 'ಇನ್ನೊಂದು ಹೆಜ್ಜೇಗೆ ಜಾಗವೆಲ್ಲಿ?' ಎಂದು ಕೇಳುವಂತೆ ಮೈದೋರಿದ್ದಾನೆ.

ಈ ಜಗನ್ನಾಟಕ ನಿರಂತರವಾದುದು. ಸಂಗೀತ ಸಹಿತವಾದ ಭಕ್ತಿಯಿಂದ ಒಂದೊಂದು ಕೀರ್ತನೆಯು ಹೇಗೆ ದೈವದ ಹತ್ತಿರ ಒಯ್ಯುವುದು ಎಂಬುದನ್ನು ಭಗವಂತನು ಪಾಣಾಳ್ವಾರ್ - ಲೋಕಸಾರಂಗಮುನಿಗಳ ದೃಷ್ಟಾಂತದಲ್ಲಿ ತೋರಿಸಿದ. ಎಂಥಾ ಮಹಾತ್ಮರಿಗೂ ಯಾವುದೋ ಒಂದು ಸಂದರ್ಭದಲ್ಲಿ ಪ್ರಾರಬ್ಧಕರ್ಮವೋ ಎಂಬಂತೆ ಕಾಲು ಎಡವುವುದು ತಪ್ಪದು. ಎಡವಿದ ಮಾತ್ರಕ್ಕೆ ಅದು ಪತನವಲ್ಲ ಎಂಬ ಭಾವನೆ ಬರಲು ಭಗವಂತನು ತೊಂಡರಡಿಪ್ಪೊಡಿ ಆಳ್ವಾರ್ - ದೇವದೇವಿಯರ ದೃಶ್ಯದ ಮೂಲಕ ಲೋಕಕ್ಕೆಲ್ಲಾ ತಿಳಿಸಿದ.

ಮಹಾತ್ಮರ ಹಿನ್ನೆಲೆಯಲ್ಲಿ ಅದ್ಭುತ ಪೂರ್ವ ಚರಿತೆ ಇರುವುದನ್ನು ತಿರುಮಂಗೈ ಆಳ್ವಾರರ ಜೀವನದಲ್ಲಿ ಕಾಣಬಹುದು. ಹಿರಣ್ಯನ ವಧೆ ಆಗಿ ಅವನು ಆದಷ್ಟುಬೇಗ ಪರಂಧಾಮಕ್ಕೆ ಮರಳಿ ಎಂದಿನಂತೆ ಸೇವೆ ಸಲ್ಲಿಸಲು ಭಗವಂತನು ಸಂಕಲ್ಪಿಸಿದಂತೆ, ಆಳ್ವಾರರನ್ನು ಉದ್ಧರಿಸಲು ಭಗವಂತನು ಅವರ ಜೀವನದ ಸಿಹಿಕಹಿಗಳನ್ನು ಆದಷ್ಟುಬೇಗ ಅನುಭವಿಸಿ ಅವರಿಗೆ ಜ್ಞಾನೋದಯವಾಗುವ ಸ್ಥಿತಿ ಉಂಟಾಗಲೆಂದು ಸಂಕಲ್ಪಿಸುವನು. ಕೀಳು ಕುಲದಲ್ಲಿ ಹುಟ್ಟಿ ಹೀನ ವೃತ್ತಿಯನ್ನು ಅವಲಂಬಿಸುವಂತೆ, ಕ್ರಮೇಣ ವೀರ ಶೂರ ಧೈರ್ಯಶಾಲಿಯಹಾಗೆ ಜೀವಿಸುವಂತೆ, ಅಪ್ಸರೆಯಂಥಾ ಕನ್ಯೆಯನ್ನು ಕೈಹಿಡಿಯುವಂತೆ ಭಗವತ್ಪ್ರೇರಣೆ ಆಗುವುದು. ಪತ್ನಿಯಿಂದಲೇ ಭಾಗವತನಾಗಿ ಪರಿವರ್ತಿಸಲ್ಪಡುವಂತೆಯೂ, ಭಗವಂತನು ಅವರಿಗೆ ಮೇಲಿಂದಮೇಲೆ ಕಷ್ಟಗಳನ್ನೂ ಅವಕ್ಕೆ ಪರಿಹಾರವನ್ನೂ ಕೊಟ್ಟು ಮತ್ತೆ ಕಷ್ಟಗಳು ತಲೆದೋರುವಂತೆ ಮಾಡಿ ಹಳೇ ಚೋರವೃತ್ತಿ ಅನಿವಾರ್ಯವಾಗುವಂತೆ ಮಾಡುವನು. ಅಂತಿಮವಾಗಿ ಬೀದಿನಾಟಕವನ್ನಾಡಿ ತನ್ನ ಸಂಕಲ್ಪವನ್ನು ಈಡೇರಿಸಿಕೊಳ್ಳುವನು. ಯತಿ ಶೇಖರರು ಹೇಳಿರುವಂತೆ ಎಷ್ಟಾದರೂ ಅವನು ಸತ್ಯಕಾಮ ಸತ್ಯಸಂಕಲ್ಪನು.

ಆಳ್ವಾರರಿಗೆ ಭಾಗವತಾರಾಧನೆಗೆ ಸಾಕಷ್ಟು ಹಣ ಒದಗಿಸಲು ಅಸಾಧ್ಯವಾಯಿತು. ಪತ್ನಿಗೆ ಕೊಟ್ಟ ಮಾತಿಗೆ ತಪ್ಪಿದಂತಾಗುವುದು ಹಾಗೂ ಭಾಗವತಾಪಚಾರ ಎಲ್ಲಿಬರುವುದೋ ಎಂದು ಹೆದರಿ ಅದೆಷ್ಟೇ ಕಷ್ಟವಾದರೂ ಸರಿ ಹಣಸಂಪಾದಿಸಿಯೇತೀರಬೇಕೆಂದು ಪಣತೊಟ್ಟು ಚೋರವೃತ್ತಿಗಿಳಿದರು. ಕೊಳ್ಳೆ ಹೊಡೆಯಲು ಮರದಮೇಲೆ ಕುಳಿತು ದಾರಿಕಾಯುತ್ತಿದ್ದರು. ಲಕ್ಷ್ಮೀನಾರಾಯಣರು ನೂತನ ದಂಪತಿಗಳಾಗಿ ಬರುತ್ತಿದ್ದರು. ಆಳ್ವಾರರು ಹಠಾತ್ತನೆ ಅವರ ಮೇಲೆ ಬಿದ್ದು ದಿವ್ಯಾಭರಣಗಳನ್ನು ಕಳಚಿ ಚೀಲಕ್ಕೆ ತುಂಬಿದರು. ಊಟದೆಲೆ ದೊನ್ನೆ ಖರ್ಚಿಗಾಗುತ್ತೆಂದು ತಿಳಿದು ಕಾಲುಂಗುರವನ್ನೂ ಬಿಡಲಿಲ್ಲ. ಕೈಯಿಂದ ತೆಗೆಯಲು ಅದು ಬಾರದೆ ಹಲ್ಲಿನಿಂದ ಕೀಳಲು ಬಗ್ಗಿದರು. ತಲೆಗೆ ದಿವ್ಯಮಾತೆಯ ಪಾದ ಸ್ಪರ್ಶವಾಯಿತು. (ಇದಕ್ಕಾಗಿಯೇ ಅವರಿಗೆ 'ಕಲಿಯನ್ (ಸಮರ್ಥನು) ಎಂದು ಹೆಸರಿದೆ) ಲೂಟಿ ಮಾಡಿದ ಮೂಟೆ ಎತ್ತಲು ಭಾರವಾಗಿತ್ತು. 'ಏಯ್ ಏನಾದರೂ ಮಂತ್ರ ಹಾಕಿದ್ದೀಯಾ? ನನಗೂ ಹೇಳು ಇಲ್ಲದಿದ್ದರೆ ನಿಮ್ಮನ್ನು ಸುಮ್ಮನೆ ಬಿಡೊಲ್ಲ' ಎಂದು ಆಳ್ವಾರರು ದಿವ್ಯದಂಪತಿಗಳಿಗೆ ಬೆದರಿಕೆಹಾಕಿದರು. 'ಆಗಲಪ್ಪಾ ಬಗ್ಗಿಬಾ ಹೇಳುತ್ತೇನೆ' ಎಂದು ಉತ್ತರಬಂದಾಗ ಆಳ್ವಾರರು ಕಿವಿಗೊಟ್ಟರು. 'ಓಂ ನಮೋ ನಾರಾಯಣಾಯ ನಮಃ' ಎಂದು ಕೇಳಿಸಿತು. ವಿದ್ಯುತ್ ಸ್ಪರ್ಶವಾದಂತೆ ಆಳ್ವಾರರು ಗರಬಡಿದವರಂತೆ ದಿವ್ಯದಂಪತಿಗಳನ್ನೇ ನೋಡುತ್ತಾ ನಿಂತರು. ಬಾಯಿಂದ ಮಾತೇ ಹೊರಡದೆ ಆನಂದ ಬಾಷ್ಪ, ಮಾಡಿದ ಕೃತ್ಯಗಳಿಗೆ ಪರಿತಾಪ ಎಲ್ಲಾ ಒಟ್ಟಿಗೆ ಉಂಟಾಯಿತು. ದಿವ್ಯದಂಪತಿಗಳು ಅದೃಶ್ಯರಾದರು. ಆ ಜಾಗವನ್ನೇ ನೋಡುತ್ತಾ ಕಲಿಯನರು ಆ ದೃಶ್ಯದ ಬಿಂಬವನ್ನೇ ನೆನೆದುಕೊಳ್ಳುತ್ತಿದ್ದರು. ಇಲ್ಲಿಗೆ ದಿವ್ಯನಾಟಕದ ದೃಶ್ಯ ಮುಗಿಯಿತು.

ಇದೀಗ ಆಳ್ವಾರರು ಪರಮಸಾತ್ವಿಕಸಂಪನ್ನರಾದರು. ಅವರಲ್ಲಿದ್ದ ಸಾಮಾನ್ಯ ಭಕ್ತಿ ಗಾಢವಾಗಿ ಪರಮ ಭಕ್ತಿಗೆ ತಿರುಗಿತು. ಮತ್ತೆ ಆ ದಿವ್ಯದರ್ಶನ ಎಂದು, ಎಲ್ಲಿಸಿಗುವುದು? ಇದೇ ಅವರನ್ನು ಕಾಡಿಸುತ್ತಿತ್ತು. ನಾಯಕಿಯ ವಿರಹಾವಸ್ಥೆಯಂತೆ ಆಳ್ವಾರರಿಗೆ ಅನುಭವವಾಯಿತು. 'ಇನಿಯಾನ್ ಎನ್ನುಂವಿಡೇನ್' --ಇನ್ನುಮೇಲೆ ಒಂದು ದಿನವೂ ಬಿಡುಲಾರೆ ಎಂದು ತಮ್ಮ ಪರಮ ಭಕ್ತಿಯನ್ನು ತೋರಿಕೊಂಡರು. ಇಂಥಾ ದಿವ್ಯಾನುಭವ ಮತ್ತೊಮ್ಮೆ ಉಂಟಾಗಬಹುದೆಂಬ ಮಹಾವಿಶ್ವಾಸದಿಂದ ಕ್ಷೇತ್ರಾಟನೆ ಆರಂಭಿಸಿದರು. ನರನಿಗೆ ನಾರಾಯಣನು ಉಪದೇಶಿಸಿದ ಬದರಿ ಕ್ಷೇತ್ರವನ್ನು ಮಂಗಳಾಶಾಸನ ಮಾಡಿ ಅಲ್ಲಿಂದ ದಕ್ಷಿಣದ ತುದಿಯವರೆಗೂ ದಿವ್ಯಕ್ಷೇತ್ರಗಳನ್ನು ಸಂದರ್ಶಿಸಿದರು. ವಿರಹವೇದನೆಯನ್ನು ತಾಳಲಾರದೆ ತಾವು ಸ್ತ್ರೀ ಎಂದೂ ಭಗವಂತನು ತಮಗೆ ಕೃಪೆಮಾಡಲೇದೇಕೆಂದು ನಿರ್ಬಂಧಪಡಿಸಿದ್ದಾರೆ. (ತಿರುನರೈಯೂರ್ ಕ್ಷೇತ್ರದ ನಿನ್ರನಂಬಿಯನ್ನು ಕುರಿತು) "ವಾಡಿನೇನ್ ವಾಡಿ", ಹಾಗೂ "ವಂದಾಯ್ ಎನ್ ಮನಮ್ ಪುಹುಂದಾಯ್" ಎಂಬ ಪಾಶುರಗಳಲ್ಲಿ ಆಳ್ವಾರರು ತಮ್ಮ ಜೀವನದ ಕಹಿ ಅನುಭವವನ್ನು ಹಾಗೂ ಭಗವಂತನ ಕೃಪಾಪ್ರವಾಹವನ್ನು ತಮ್ಮ ಕೃತಿ 'ಪೆರಿಯ ತಿರುಮೊಳಿ'ಯಲ್ಲಿ ಹೇಳಿರುತ್ತಾರೆ. ಶ್ರೀ ಮದಾಳ್ವಾರರಿಗೆ ಲಕ್ಷ್ಮೀನಾರಾಯಣರೇ ಆಚಾರ್ಯರು. ದಿವ್ಯ ಮಾತೆಯ ಕೃಪೆ ಪ್ರಥಮವಾಗಿ ಉಂಟಾಗಿ ಪ್ರಪತ್ತಿಯೋಗ ತಾನಾಗಿಯೇ ಒದಗಿತು. "ತಿರುಮಂತ್ರತ್ತೈ ತಿರುಮಂಗೈ ಆಳ್ವಾರುಕ್ಕು ಸರ್ವೇಶ್ವರನ್ ತಾನೇ ಉಪದೇಶಿತ್ತಾನ್" ಎಂದು ದೇಶಿಕರು ರಹಸ್ಯ ತ್ರಯಸಾರದಲ್ಲಿ ಹೇಳಿರುತ್ತಾರೆ. ಭಗವದನುಭವದ ರುಚಿಯನ್ನು ಕಂಡ ಆಳ್ವಾರವರು ಮತ್ತೆ ಆ ಅಮೃತಕ್ಕಾಗಿ ಎಲ್ಲಾ ದಿವ್ಯಕ್ಷೇತ್ರಗಳನ್ನು ಸೇವಿಸಿರುವುದು ಇಂದಿನ ಭಕ್ತ ಪೀಳಿಗೆಗೆ ಕ್ಷೇತ್ರ ಸೇವೆ ಮಾಡಲು ಆದರ್ಶಪ್ರಾಯವಾಗಿದೆ. ಅಂದರೆ ಗೃಹಾರಾಧನೆಗಿಂತ ಆಲಯಾರ್ಚನೆಯೇ ಗುರುತರವಾದದು ಎಂಬುದೇ ಆಳ್ವಾರರ ಸಂದೇಶ.

ಆಳ್ವಾರರಡಿದಾವರೆಗಳಲ್ಲಿ ಶರಣು



# ದೀಪಾವಳೀ ಮಹಾತ್ಮ್ಯ

---ಕಂದಾಡೈ ಕೇಶವನ್.



ಪದ್ಮಪುರಾಣದ ನೂರಾ ಇಪ್ಪತ್ತಾಲ್ಕನೆಯ ಅಧ್ಯಾಯದಲ್ಲಿ ದೀಪಾವಳೀ ಮಹಾತ್ಮೆಯನ್ನು ಭಗವಾನ್ ವ್ಯಾಸಮಹರ್ಷಿಗಳು ಬಹಳ ಸೊಗಸಾಗಿ ವಿವರಿಸಿದ್ದಾರೆ.

ಶ್ರೀಕೃಷ್ಣನ ಪ್ರಿಯತಮೆ ಸತ್ಯಭಾಮೆಯು ಶ್ರೀಕೃಷ್ಣನನ್ನು ಕುರಿತು ಹೀಗೆಂದು ಕೇಳುತ್ತಾಳೆ-

ದೀಪಾವಳೀ ಫಲಂ ನಾಥ
ವಿಶೇಷಾತ್ ಬ್ರೂಹಿ ಮೇ ಪ್ರಭೋ
ಕಿಮರ್ಥಂ ಕ್ರಿಯತೇ ನಾತು
ತಸ್ಯಾಃ ಕಾ ದೇವತಾ ಭವೇತ್

"ಪ್ರಭು ದೀಪಾವಳೀ ಮಹಿಮೆಯನ್ನು ದಯವಿಟ್ಟು ವಿವರವಾಗಿ ನನಗೆ ತಿಳಿಸಿ, ಆ ಹಬ್ಬವನ್ನು ಏಕೆ ಆಚರಿಸುತ್ತಾರೆ? ದೀಪಾವಳಿಯ ಆದಿದೇವತೆ ಯಾರು? ಅದರ ಫಲವೇನು?" ಅದಕ್ಕೆ ಶ್ರೀಕೃಷ್ಣನು ಅವಳ ಪ್ರಶ್ನೆಗೆ ಉತ್ತರವಾಗಿ—

ಕಾರ್ತೀಕಸ್ಯಾ ಸಿತೇ ಪಕ್ಷೇ
ತ್ರಯೋದಶ್ಯಾಂತು ಭಾಮಿನೀ
ಯಮದೀಪಂ ಬಹಿರ್ದದ್ಯಾತ್
ಅಪಮೃತ್ಯುರ್ವಿನಶ್ಯತಿ
ಮೃತ್ಯುನಾ ಪಾಶ ಹಸ್ತೇನ
ಕಾಲೇನ ಭಾರ್ಯಯಾ ಸಹ
ತ್ರಯೋದಶ್ಯಾಂ ದೀಪದಾನಾತ್
ಸೂರ್ಯಜಃ ಪ್ರಿಯತಾಂ ಇತಿ

ಕಾರ್ತೀಕ ಮಾಸದ ಕೃಷ್ಣ ಪಕ್ಷದ ತ್ರಯೋದಶಿಯ ದಿನ ಪ್ರತಿಯೊಬ್ಬರೂ ಮನೆಯ ಮುಂದೆ ಯಮ ದೀಪವನ್ನು ಹಚ್ಚಬೇಕು. ಇದರಿಂದ ಅಪಮೃತ್ಯುವು ದೂರವಾಗುತ್ತದೆ. ಹಾಗೂ ತ್ರಯೋದಶಿಯ ದಿನ ಪ್ರತಿಯೊಬ್ಬರೂ ಸೂರ್ಯನನ್ನು ಸೂರ್ಯನ ಪುತ್ರನಾದ ಯಮನನ್ನು ಪ್ರಾರ್ಥಿಸಿ ದೀಪವನ್ನು ಬೆಳಗಿಸಿದರೆ ಶುಭಕರ. ಅಪಮೃತ್ಯುನಿವಾರಣೆ. ಕಾರ್ತೀಕ ಕೃಷ್ಣಪಕ್ಷದ ತ್ರಯೋದಶಿ ದಿನ ಚಂದ್ರೋದಯದ ಕಾಲದಲ್ಲೇ ಅಂದರೆ ಚತುರ್ದಶಿಯ ಸೂರ್ಯೋದಯಕ್ಕೆ ಮುನ್ನ ಅಭ್ಯಂಜನ ಸ್ನಾನ ಮತ್ತು ದೀಪಗಳನ್ನು ಬೆಳಗಿಸಿ ಭಗವಂತನಲ್ಲಿ ಪ್ರಾರ್ಥನೆ ಮಾಡಬೇಕು. ನರಕ ಚತುರ್ದಶಿ ದಿನ ಪ್ರತಿಯೊಬ್ಬರೂ ಉಷಃಕಾಲದಲ್ಲಿ ಅಭ್ಯಂಜನ ಸ್ನಾನವನ್ನು ತಪ್ಪದೇ ಮಾಡಬೇಕೆಂದು ಶ್ರೀಕೃಷ್ಣನು ಹೇಳುವಾಗ-

ತೈಲೇ ಲಕ್ಷ್ಮೀಃ ಜಲೇ ಗಂಗಾ
ದೀಪಾವಲ್ಯಾಂ ಚತುರ್ದಶೀಮ್
ಪ್ರಾತಃ ಸ್ನಾನಂ ಹಿ ಯಃ ಕುರ್ಯಾತ್
ಯಮಲೋಕಂ ನ ಪಶ್ಯತಿ

## ಶ್ರೀ ವೆಂಕಟೇಶ್ವರ ಕೇಂದ್ರ ಗ್ರಂಥಾಲಯ
## ಸಂಶೋಧನ ಕೇಂದ್ರ -- ತಿರುಪತಿ

# ಒಂದು ವಿನಂತಿ

1993 ರಲ್ಲಿ ತಿ.ತಿ.ದೇ. ಆಡಳಿತ ಮಂಡಳಿಯ ವಜ್ರಮಹೋತ್ಸವ ವರ್ಷದಲ್ಲಿ ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ, ಸಂಶೋಧನ ಕೇಂದ್ರವನ್ನು ನೆಲೆಗೊಳಿಸಿ ಅದನ್ನು ಸ್ವಾಮಿ ಭಕ್ತರ ಸೇವೆಯಲ್ಲಿ ಸಮರ್ಪಿಸಲಾಯಿತು. ನಮ್ಮ ಪರಂಪರೆಯ ವಾಸ್ತುಶಿಲ್ಪದ ಹಾಗೂ, ಆಧುನಿಕ ವಾಸ್ತುಶಾಸ್ತ್ರದ ಉತ್ತಮಾಂಶಗಳನ್ನು ಒಳಗೊಂಡು ನಿಂತಿರುವ ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಅಪೂರ್ವ ಪುಸ್ತಕಾಗಾರವಾಗಿ ವೇದೋಪನಿಷತ್ತುಗಳ, ಇತಿಹಾಸ ಪುರಾಣಗಳ, ಶಾಸ್ತ್ರ ಭಗವದ್ಗೀತೆಗಳ ಉಪಾದೇಯವೂ ಭವ್ಯವೂ ಆದ ಸಂದೇಶವನ್ನು ಪ್ರಸಾರ ಮಾಡುವ ಉದ್ದೇಶ ಹೊಂದಿದೆ.

ಸನಾತನ ಧರ್ಮದ ವೈವಿಧ್ಯಮಯ ಮುಖಗಳ, ಭಾರತೀಯ ಚಿಂತನಶೀಲತೆಯ, ತತ್ತ್ವ, ಧರ್ಮ, ಸಂಗೀತವೇ ಮೊದಲಾದ ಪರಂಪರಾಗತ ಸಂಪದ್ಭರಿತ ಸಂಸ್ಕೃತಿಯಲ್ಲಿ ಸಂಶೋಧನೆ ನಡೆಸಲು ಅವಕಾಶವನ್ನು ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಕಲ್ಪಿಸುವುದು. ಭಾರತೀಯ ಶಾಸ್ತ್ರದ ಬಗ್ಗೆ ಅಪರೂಪವೂ, ಅಮುದ್ರಿತವೂ ಆದ ಅಂಶಗಳನ್ನು ಪ್ರಕಟಿಸುವುದೂ, ಸಂಸ್ಕೃತಪಾಠಗಳ ಮೂಲ ಪ್ರತಿಗಳನ್ನೂ ಅವುಗಳ ಸರಳಾನುವಾದಗಳನ್ನೂ ಪ್ರಕಟಿಸುವುದೂ, ನಮ್ಮ ಉದ್ದೇಶವಾಗಿದೆ. ಈ ಪುಸ್ತಕ ಭಂಡಾರವು ಭಾರತೀಯ ಸಂಸ್ಕೃತಿಯ ದೇವಾಲಯವಾಗಿ, ಶಿಕ್ಷಣ, ಸಂಶೋಧನೆಯ ಮಹತ್ ಸಂಸ್ಥೆಯನ್ನಾಗಿ ಮಾಡುವುದೇ ನಮ್ಮ ಪವಿತ್ರತಮ ಕರ್ತವ್ಯವಾಗಿದೆ. ಇದೀ ಯೋಜನೆ ಸಾಕಷ್ಟು ಸಂಪನ್ಮೂಲವನ್ನು ಅಪೇಕ್ಷಿಸುತ್ತದೆ.

ಹೀಗಾಗಿ, ಸಾರ್ವಜನಿಕರಲ್ಲಿ, ಸ್ವಯಂಸೇವಾ ಸಂಸ್ಥೆಗಳಲ್ಲಿ ಧನದ ರೂಪದಲ್ಲಿ ಆಗಲೀ, ಪುಸ್ತಕ ರೂಪದಲ್ಲಿಯಾಗಲೀ ಉದಾರವಾದ ದೇಣಿಗೆಗಳನ್ನು ನೀಡಬೇಕೆಂದು ಮನವಿ ಮಾಡುತ್ತೇವೆ.

ವ್ಯಕ್ತಿಗಳು ಹಾಗೂ ಸಂಸ್ಥೆಗಳು ತಮ್ಮಲ್ಲಿನ ಅಪರೂಪದ ಪುಸ್ತಕಗಳನ್ನೂ ಗ್ರಂಥಾಲಯಕ್ಕೆ ನೀಡಬಹುದು.

ತಮ್ಮ ಎಲ್ಲ ದೇಣಿಗೆಗಳನ್ನು ಪುಸ್ತಕವಾಗಲೀ, ಹಣವಾಗಲೀ ಕಳುಹಿಸ. ಬೇಕಾದ ವಿಳಾಸ -- ವಿಶೇಷಾಧಿಕಾರಿ, ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಹಾಗೂ ಸಂಶೋಧನ ಕೇಂದ್ರ -- ತಿರುಪತಿ -- 517 502.

ದೀಪಾವಳೀ ದಿನ (ಚತುರ್ದಶಿಯಂದು) ತೈಲದಲ್ಲಿ ಲಕ್ಷ್ಮೀದೇವಿಯು, ಜಲದಲ್ಲಿ ಗಂಗಾಮಾತೆ ನೆಲೆಸಿರುತ್ತಾರೆ. ಅಂತಹ ಸಮಯದಲ್ಲಿ ಪ್ರಾತಃ ಸ್ನಾನವನ್ನು ಮಾಡಿದವರಿಗೆ ನರಕದ ಭೀತಿಯಿಲ್ಲ (ಯಮಲೋಕದರ್ಶನವಿಲ್ಲ).

ದೀಪಾವಳಿ ಹಬ್ಬದ ಮೊದಲನೆಯ ದಿನದ ಕಲಾಪ ಅಭ್ಯಂಗಸ್ನಾನ. ದೀಪ ಹಚ್ಚುವ ಕಾರ್ಯ. ಇದನ್ನು ತಿಳಿಸಿದ ಮೇಲೆ ದೀಪಾವಳಿಯ ಹಬ್ಬ ದೀಪಗಳ ಹಬ್ಬವಾದ್ದರಿಂದಲೇ ನರಕ ಚತುರ್ದಶಿಯಿಂದ ಪ್ರಾರಂಭಿಸಿ ಮೂರು ದಿನಗಳ ಹಬ್ಬ ಸಂತಸದ ಹಬ್ಬ, ಎರಡನೆಯದಿನ ಕಲಾಪ ಹೆಚ್ಚಿಗೆ ಲಕ್ಷ್ಮೀ ಪೂಜೆ ಎಲ್ಲಾ ಕಡೆ ದೀಪಗಳನ್ನು ಬೆಳಗಿಸಿ ಆಚರಿಸುವ ದೀಪೋತ್ಸವ. ಅಮಾವಾಸ್ಯೆ ದಿನ ಸ್ನಾನವನ್ನು ಆಚರಿಸಿ ದೇವರನ್ನು ಪೂಜಿಸಿ ಪಿತೃತರ್ಪಣವನ್ನು ಮಾಡಿ ಹಾಲು, ಮೊಸರು ಇತ್ಯಾದಿಗಳಿಂದ ಪಾರ್ವಣ ಶ್ರಾದ್ಧವನ್ನು ಮಾಡಬೇಕು. ಸದಾಚಾರ ಸಂಪನ್ನರಾದ ಬ್ರಾಹ್ಮಣರ ಭೋಜನವನ್ನು ಮಾಡಿಸಬೇಕು.

ಕೃತ್ವಾತು ಪಾರ್ವಣಂ ಶ್ರಾದ್ಧಂ
ದಧಿ ಕ್ಷೀರ ಘೃತಾದಿಭಿಃ

ಅಂದು ಮಧ್ಯಾಹ್ನ ಸ್ನೇಹಿತರೊಡನೆ ಪರಸ್ಪರ ಪ್ರೀತಿ ವಿಶ್ವಾಸಗಳಿಂದ ನಡೆದುಕೊಳ್ಳಬೇಕು. ಶ್ರೀಕೃಷ್ಣನು ಅಮಾವಾಸ್ಯೆಯ ದಿನ ಲಕ್ಷ್ಮೀಪೂಜೆಯ ಆಚರಣೆ ಬಗ್ಗೆ ತಿಳಿಸುತ್ತಾ ಶ್ರೀಮನ್ನಾರಾಯಣನು ಮುಂದೆ ಶಯನೀ ಏಕಾದಶಿ ದಿನ ಎಚ್ಚರಗೊಳ್ಳುವನು. ಆದ್ದರಿಂದ ಅದಕ್ಕಿಂತ ಮುಂಚೆ ಅಮಾವಾಸ್ಯೆಯ ದಿನ ಸುಮಂಗಲಿಯರಿಂದ ವಿಷ್ಣುಪತ್ನಿ ಮಹಾಲಕ್ಷ್ಮೀದೇವಿಯ ಪೂಜೆಯನ್ನು ಮಾಡಿದರೆ, ಆಕೆ ಅಂತಹವರನ್ನು ಎಂದಿಗೂ ತೊರೆಯಲಾರಳು. ಆದಿನ ಈ ಕೆಳಗಿನ ಮಂತ್ರವನ್ನು ಹೇಳಿಕೊಂಡು ಲಕ್ಷ್ಮೀಪೂಜೆ ಮಾಡಿದರೆ, ಲಕ್ಷ್ಮಿಯು ಪ್ರಸನ್ನಳಾಗುತ್ತಾಳೆ.

ತ್ವಂ ಜ್ಯೋತಿಃ ಶ್ರೀ ರವಿಚಂದ್ರೋ
ವಿದ್ಯುತ್ ಸೌವರ್ಣತಾರಕಾ
ಸರ್ವೇಷಾಂ ಜ್ಯೋತಿಷಾಂ ಜ್ಯೋತಿಃ
ದೀಪಜ್ಯೋತಿಃ ಸ್ಥಿತಾ ತಥಾ
ಯಾ ಲಕ್ಷ್ಮೀರ್ದಿವಸೇ ಪುಣ್ಯೇ
ದೀಪಾವಲ್ಯಾಂ ಚ ಭೂತಲೇ
ಗವಾಂ ಗೋಷ್ಠ್ಯಾಂಚ ಕಾರ್ತೀಕ್ಯಾಂ
ಸಾ ಲಕ್ಷ್ಮೀರ್ವರದಾ ಮಮ

ಹಿಂದೆ ದೀಪಾವಳಿಯ ದಿನ ಶಿವ ಪಾರ್ವತಿಯರು ವಿನೋದವಾಗಿ ಜೂಜು ಆಡಿದ್ದರಿಂದ

ಈಗಲೂ ಆದಿನ ವಿನೋದಕ್ಕಾಗಿ ಪಗಡೆ ಯಾಟ ಮುಂತಾದ ಜೂಜು ಆಟಗಳನ್ನು ಆಡುತ್ತಾರೆ. ಪದ್ಮ ಪುರಾಣದಲ್ಲಿ--

ಶಂಕರಶ್ಚ ಭವಾನೀ ಚ
ಕ್ರೀಡಯಾ ದ್ಯೂತ ಮಾಸ್ಥಿತೇ
ಭವಾನ್ಯಾ ಅಭ್ಯರ್ಚಿತಾ ಲಕ್ಷ್ಮೀ:
ಧೇನು ರೂಪೇಣ ಸಂಸ್ಥಿತಾಂ

ಶಿವ ಪಾರ್ವತಿಯರು ಪಗಡೆ ಆಟ ಆಡುವಾಗ ಪಾರ್ವತಿಯು ದನ ಕಟ್ಟುವ ಕೊಟ್ಟಿಗೆಗೆ ಬಂದು ಅಲ್ಲಿ ಹಸುವಿನ ರೂಪದಲ್ಲಿದ್ದ ಲಕ್ಷ್ಮಿಯನ್ನು ಪೂಜಿಸಿದ್ದರಿಂದ ಆಕೆ ಶಿವನನ್ನು ಗೆದ್ದಳು ಎಂಬುವುದಾಗಿ ಉಲ್ಲೇಖನ ವಿರುವುದರಿಂದ ಆದಿನ ಗೆದ್ದ ಸ್ತ್ರೀ, ಪುರುಷರು ವಿಜಯೋತ್ಸವವನ್ನು ಆಚರಿಸುವ ಪದ್ಧತಿ ಈಗಲೂ ರೂಢಿಯಲ್ಲಿದೆ.

ದೀಪಾವಳಿಯಲ್ಲಿ ಹಗಲು ಗೋಪೂಜೆ ಎಲ್ಲೆಡೆ ಮಾಡುತ್ತಾರೆ. ಅಂದು ಹಸುಗಳನ್ನು ಸ್ನಾನಮಾಡಿಸಿ ಅಲಂಕಾರ ಮಾಡಿ ಅದಕ್ಕೆ ಧಾನ್ಯವನ್ನು ತಿನ್ನಿಸುತ್ತಾರೆ. ಆ ಪೂಜೆಗೆ ಗೋವಿಂದನ ಪೂಜೆ ಗೋವರ್ಧನ ಗೋ ಪೂಜೆ ಎಂಬುವುದಾಗಿ ಕರೆಯುತ್ತಾರೆ. ಆದಿನ ಗೋವರ್ಧನನ್ನು ಪೂಜಿಸುವಾಗ-

ಗೋವರ್ಧನ ಧರಾಧಾರ
ಗೋಕುಲ ತ್ರಾಣ ಕಾರಕ
ವಿಷ್ಣು ಬಾಹು ಕೃತೋಚ್ಛ್ರಾಯ
ಗವಾಂ ಕೋಟಿ ಪ್ರದೋಭವ

ಎಂಬುವುದಾಗಿ ಕೃಷ್ಣನನ್ನು ಸ್ತುತಿಸಬೇಕು. ಗೋವುಗಳನ್ನು ಪೂಜಿಸುವಾಗ ಸ್ತುತಿಸುವ ಮಂತ್ರ--

ಅಗ್ರತಃ ಸಂತು ಮೇ ಗಾವೋ
ಗಾವೋ ಮೇ ಸಂತು ಪೃಷ್ಠತಃ
ಗಾವೋ ಮೇ ಹೃದಯೇ ಸಂತು
ಗವಾಂ ಮಧ್ಯೇ ವಸಾಮ್ಯಹಂ

ಈ ಗೋವರ್ಧನ ಹಾಗೂ ಗೋಪೂಜೆ ದೀಪಾವಳಿಯ ಮೂರನೆಯ ದಿನ ಬಲಿಪಾಡ್ಯಮಿ ದಿವಸ. ಆದಿನ ರಾತ್ರಿಯಲ್ಲಿ ಬಲಿಚಕ್ರವರ್ತಿಯನ್ನು ಪೂಜೆ ಮಾಡಬೇಕು. ವಿಷ್ಣುವು ವಾಮನ ಅವತಾರದಲ್ಲಿ ಬಲಿ ಚಕ್ರವರ್ತಿಯನ್ನು ಪಾತಾಳಕ್ಕೆ ಕಳುಹಿಸಿದ ಪುಣ್ಯ ದಿನ. ಬಲಿಯ ಭಕ್ತಿಗೆ ಮೆಚ್ಚಿ ವಾಮನನು ತ್ರಿವಿಕ್ರಮನಾದ ದಿನ. ಬಲಿಯ ಭಕ್ತಿಗೆ ಬದ್ಧನಾಗಿ ಆತನ ದ್ವಾರಪಾಲಕನಾದ ಪುಣ್ಯದಿನ. ಆ ಭಕ್ತನ ನೆನಪಿಗಾಗಿ ಪ್ರತಿವರ್ಷ ಮನೆಯ ಮುಂದೆ ಆತನ ಪ್ರತಿಮೆ ಮಾಡಿ ಪೂಜೆ ಮಾಡುವ ಸಂಪ್ರದಾಯ. ಆದಿನ ಪೂಜೆ ಮಾಡಿದ್ದವರ ಸಕಲ ಪುಣ್ಯರಾಶಿಯು ಬಲಿಗೆ ಹೋಗಿ ಸೇರುವ ವರ ವಿಷ್ಣುವಿನಿಂದ ಬಲಿಗೆ ಬಂದ ಭಾಗ್ಯ ಸಂಪತ್ತು. ಕಾರ್ತೀಕ ಶುದ್ಧ ದ್ವಿತೀಯವನ್ನು ಯಮದ್ವಿತೀಯವೆಂದು ಕರೆಯುತ್ತಾರೆ.

ಯಮುನಾದೇವಿ ತನ್ನ ಸೋದರನಾದ ಯಮನಿಗೆ ಆತಿಥ್ಯನೀಡಿ ಉಡುಗೊರೆ ಕೊಟ್ಟು ಸಂತೈಸಿದ ಸುದಿನ. ಆ ದಿನವೇ ಯಮನಿಗೆ ನರಕಾಧಿಪತ್ಯ ಬಂದಿದ್ದು. ಅದೇ ಪದ್ಧತಿ ಇಂದಿಗೂ ಸೋದರಿಯರಿಗೆ ಸೋದರರು ಉಡುಗೊರೆ ಕೊಡುವ ಸಂಪ್ರದಾಯ ರೂಡಿಯಲ್ಲಿದೆ. ಆದಿನ ಸೋದರರು ಸೋದರಿಯರ ಮನೆಯಲ್ಲಿ ಭೋಜನವನ್ನು ಮಾಡಿ ಸೋದರಿಯರಿಗೆ ವಸ್ತ್ರ ಆಭರಣ ನೀಡಿ ಸಂತೋಷ ಪಡುತ್ತಾರೆ. ಕಾರ್ತೀಕ ಶುಕ್ಲದ ಯಮ ದ್ವಿತೀಯ ದಿನ ಯಮನನ್ನು ಹೀಗೆಂದು ಪೂಜಿಸಬೇಕೆಂದು ಪದ್ಮಪುರಾಣದ ಉಕ್ತಿ.

ಮಹಿಷಾಸನ ಸಮಾರೂಢೋ
ದಂಡ ಮುದ್ಗರ ಭೃತ್ಪ್ರಭುಃ
ವೇಷ್ಠಿತಃ ಕಿಂಕರೈಃ ಹೃಷ್ಟೈಸ್ತಸ್ಮೈ
ಯಾಮ್ಯಾತ್ಮನೇ ನಮಃ

ಇಂತಹ ಯಮ ದ್ವಿತೀಯವನ್ನು ಆಚರಿಸಿದವರಿಗೆ ಆ ವರ್ಷ ಪೂರ್ತಿ ಕಲಹ ವೈರಿಗಳ ಭೀತಿಯಿಲ್ಲ.

ಧನ್ಯಂ ಯಶಸ್ಯಂ ಆಯುಷ್ಯಂ
ಧರ್ಮಕಾಮಾರ್ಥ ಸಾಧನಂ
ಎಂಬುವುದಾಗಿ ಫಲಶ್ರುತಿ ಇದೆ.

ಹೀಗೆ ದೀಪಾವಳಿ ಮಹಿಮೆ ತಿಳಿಸುವಾಗ ಹಲವು ಪುರಾಣಗಳಲ್ಲಿ ಧರ್ಮಶಾಸ್ತ್ರಗಳಲ್ಲಿ ಹಲವು ಬಗೆಯಾಗಿ ತಿಳಿಸಿದ್ದರೂ ರೂಢಿಯಲ್ಲಿ ದೀಪಾವಳಿ ದೀಪಗಳ ಹಬ್ಬ. ಮೊದಲನೆಯ ದಿನ ನರಕಚತುರ್ದಶಿ, ಶ್ರೀಕೃಷ್ಣನು ನರಕಾಸುರನನ್ನು ಕೊಂದ ದಿನ. ನರಕವೆಂದರೆ ಕತ್ತಲು. ಮನಸ್ಸಿನ ಕತ್ತಲು, ಕತ್ತಲಿನಿಂದ ಬೆಳಕಿಗೆ ಬರುವುದಕ್ಕೆ ನಾಂದಿ ಈ ಹಬ್ಬ.

ಎರಡನೆಯ ದಿನ ದೀಪಾವಳಿ. ಅಮಾವಾಸ್ಯೆಯ ಲಕ್ಷ್ಮೀಪೂಜೆ. ಮೂರನೆಯ ದಿನ ಬಲೀಂದ್ರಪೂಜೆ, ಗೋಪೂಜೆ ಇತ್ಯಾದಿ. ಧರ್ಮ ಸಿಂಧುವಿನ ಪ್ರಕಾರ ಚತುರ್ದಶಿ ಎಣ್ಣೆಸ್ನಾನದೊಡನೆ ಕಾರ್ತೀಕಸ್ನಾನವೂ ಮಂಗಳಕರವಾದುದು ಹಾಗೂ ಶುಭಕರವೆಂದು ತಿಳಿಸುವಾಗ--

ಆಶ್ವೀನಃ ಕೃಷ್ಣಪಕ್ಷ
ಚತುರ್ದಶ್ಯಾಂ ಚಂದ್ರೋದಯ
ವ್ಯಾಪ್ತಿನ್ಯಾಂ ನರಕಭೀರುಭಿಃ
ತಿಲ ತೈಲೇ ನಾಭ್ಯಂಗ ಸ್ನಾನಂ ಕಾರ್ಯಂ
ಅಭ್ಯಃ ಸ್ನಾನೋತ್ತರಂ ತಿಲಕಾದಿ
ಕೃತ್ವಾ ಕಾರ್ತೀಕ ಸ್ನಾನಂ ಕಾರ್ಯಂ
ಕಾರ್ತೀಕ ಸ್ನಾನೋತ್ತರಂ
ಯಮ ತರ್ಪಣಂ ಕಾರ್ಯಂ

ಆಶ್ವೀಜ ಶುದ್ಧ ತ್ರಯೋದಶಿ ರಾತ್ರಿ ಎಳ್ಳೆಣ್ಣೆ ದೀಪ ಯಮನಿಗೂ ಶನಿಗೂ ಪಿತೃದೇವತೆಗಳಿಗೆ ಪ್ರೀತಿಯಾದ್ದರಿಂದ ಹಚ್ಚಬೇಕೆಂದು ತಿಳಿಸಿದ ಶಾಸ್ತ್ರಕಾರರು, ಎಳ್ಳೆಣ್ಣೆ ಅಭ್ಯಂಗಸ್ನಾನವೂ ತಿಲದಿಂದ ಯಮ ತರ್ಪಣವೂ ಸಂವತ್ಸರವಾದುದೆಂದು ಉಲ್ಲೇಖಿಸುತ್ತಾರೆ. ಇಲ್ಲಿ ಎಳ್ಳಿಗೆ ಹೆಚ್ಚಿಗೆ ಪ್ರಾದಾನ್ಯ ಕೊಟ್ಟಿದ್ದಾರೆ.

ಕೆಲವು ಪುರಾಣಗಳು ಐತಿಹ್ಯಗಳಿಂದ ದೀಪಾವಳಿಗೆ ಇನ್ನೂ ಕೆಲವು ವೈಶಿಷ್ಟ್ಯಗಳನ್ನು ಪೋಣಿಸುತ್ತಾರೆ. ಉದಾಹರಣೆಗೆ ಶ್ರೀರಾಮಚಂದ್ರನು ಹದಿನಾಲ್ಕು ವರ್ಷ ವನವಾಸ ಮಾಡಿ ಅಯೋಧ್ಯೆಗೆ ಹಿಂತಿರುಗಿದ ದಿನವು ದೀಪಾವಳಿ ದಿನವಾಗಿದೆ. ಪಾಂಡವರು ಅಜ್ಞಾತವಾಸವನ್ನು ಮುಗಿಸಿ ಎಲ್ಲರಿಗೂ ಪುನಃ ಕಾಣಿಸಿಕೊಂಡ ದಿನವು ದೀಪಾವಳಿ ದಿನ. ಜೈನರಿಗೆ ಕಾರ್ತೀಕ ಮಾಸವು ಮಹಾವೀರಶಕೆಯ ಆರಂಭದ ಮಾಸವಾಗಿ, ಮಹಾವೀರನ ಮಹಾ ನಿರ್ಯಾಣದ ಕುರುಹಿನಲ್ಲಿ (ನೆನಪಿಗೆ) ದೀಪಾವಳಿ ಆಚರಿಸುತ್ತಾರೆ. ತಮ್ಮ ಹೊಸ ಲೆಕ್ಕದ ಪುಸ್ತಕಗಳನ್ನು ಬರೆಯುತ್ತಾರೆ.

ಉತ್ತರ ಭಾರತದಲ್ಲಿ ಉಜ್ಜಯಿನಿಯ ರಾಜನಾಗಿದ್ದ ವಿಕ್ರಮಾದಿತ್ಯನಿಗೆ ಪಟ್ಟಾಭಿಷೇಕವಾಗಿದ್ದು ದೀಪಾವಳಿಯ ಬಲಿಪಾಡ್ಯದ ದಿನ. ಹೀಗಾಗಿ ವಿಕ್ರಮ ಶಕ ವರ್ಷಾರಂಭ ಆ ದಿನ. ದಕ್ಷಿಣಭಾರತದಲ್ಲಿ ಯುಗಾದಿ ವರ್ಷಾರಂಭವಾಗುವಂತೆ ಉತ್ತರದವರಿಗೆ ಬಲಿಪಾಡ್ಯಮಿ ದಿನವೇ ವರ್ಷಾರಂಭ. ಬಂಗಾಳದಲ್ಲಿ ನದಿ ಸರೋವರ ಕೆರೆಗಳಲ್ಲಿ ದೀಪಗಳನ್ನು ಹಚ್ಚಿ ತೇಲಿಬಿಡುತ್ತಾರೆ. ಬಡವ ಶ್ರೀಮಂತ ಎಂಬುವ ತಾರತಮ್ಯವಿಲ್ಲದೆ ಎಲ್ಲರ ಮನೆಗಳಲ್ಲಿ ದೀಪಾವಳಿ ಆಚರಿಸಲ್ಪಡುತ್ತದೆ. ದೀಪಾವಳಿ - ಬೆಳಕಿಗೆ, ಜ್ಞಾನಕ್ಕೆ ಕ್ರಿಯಾಶಕ್ತಿಗೆ, ಜೀವನದ ತುಂಬು ಚೈತನ್ಯಕ್ಕೆ ಭವ್ಯಸ್ಮೃತಿಯನ್ನು ನೀಡಿ ಉದ್ದೀಪನಗೊಳಿಸುವ ಏಕೈಕ ಹಬ್ಬಗಳ ರಾಜ. ಮನೆ ಮನಗಳನ್ನು ಬೆಳಗಿಸುವ ಸಂಕೇತದ ಬೆಳಕಿನ ಹಬ್ಬ. ನಂದಾದೀಪ. ಕನ್ನಡದ ಕವಿಗಳೆಲ್ಲರೂ ದೀಪಾವಳಿ ಬಗ್ಗೆ ತುಂಬ ಹೃದಯದಿಂದ ಹಾಡಿ ನಲಿದಾಡಿದ್ದಾರೆ. ಪೂಜ್ಯ ಡಾ. ಪು. ತಿ. ನರಸಿಂಹಾಚಾರ್ಯರು-

ಬಂದಿತು ದೀಪಾವಳಿ ಮನೆ ಮನೆಯೊಳು
ಕುಡಿ ಯಾಡಿಸುತಿದೆ ನರುಬೆಳಕು

ಎಂಬುವುದಾಗಿ ಹೇಳಿದರೆ, ಗೋಪಾಲಕೃಷ್ಣ ಅಡಿಗರು ತಮ್ಮ ಭಾವ ತರಂಗದಲ್ಲಿ ದೀಪಾವಳಿಯನ್ನು ಕುರಿತು--

ಇಂದು ದೀಪಾವಳಿಗೆ
ತೆರೆ ಅಗಲ ಬಾಗಿಲ
ಸೊಂಡಿಲಾಡಿಸಿ ಬರಲಿ ಆನೆ
ಮುದ ಮದ್ದಾನೆ
ಬೆಳಕು ಬೃಂಹಿತದ ಸಂಹಿತೆ
ಕೇಳಿ ಕೊಳಿಯಲಿ
ಬಳಿ ಮನೆಯ ಕಸವು ಕೊಳೆ,
ಜೇಡರ ಬಲೆ

ಮನಕೆ ಹತ್ತಿದ ಮಾಲಿನ್ಯವನ್ನು ತೊಳೆದು ಮನದಲ್ಲಿ ಜ್ಞಾನ ಹಣತೆಯನ್ನು ಬೆಳಗಿಸಿದರೆ ಮಾತ್ರ ದೀಪಾವಳಿಗೆ ನಾವು ನೀಡುವ ಉಡುಗೊರೆ. ಅದೇ ನಿಜವಾದ ನಂದಾದೀಪ.





## ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ

**ಕಪಿಲತೀರ್ಥ, ತಿರುಪತಿ.**

ತಿರುಪತಿಯ ಕಪಿಲತೀರ್ಥವಲ್ಲಿರುವ

ಶ್ರೀ ಕಪಿಲೇಶ್ವರಸ್ವಾಮಿ

ದೇವಾಲಯದಲ್ಲಿ ಆಸ್ತಿಕ

ಭಕ್ತ ಪ್ರಯೋಜನಕ್ಕಾಗಿ—

**ನಿತ್ಯಾಭಿಷೇಕ ಸೇವೆ**

—ಏರ್ಪಡಿಸಲಾಗಿದೆ. ವರ್ಷಕ್ಕೆ ೪೨ ರೂಪಾಯಿ ಶುಲ್ಕ ಅಥವಾ ಒಂದೇ ಬಾರಿಗೆ ೫೦೦ ರೂಗಳ ಇಡುಗಂಟು ಹಾಗೂ ೪೨ ರೂಗಳ ಆರಂಭವರ್ಷದ ಶುಲ್ಕವನ್ನು ನೀಡುವುದರ ಮೂಲಕ ಈ ಸೆ .ವೆಯನ್ನು ನಡೆಸಬಹುದಾಗಿದೆ. ವರ್ಷದಲ್ಲಿ ಎರಡು ಬಾರಿ ಇಬ್ಬರು ವಯಸ್ಕರನ್ನು ಈ ಸೇವೆಯ ಸಂದರ್ಶನಕ್ಕೆ ಅನುಮತಿಸಲಾಗುವುದು.

ಭಕ್ತರು ಈ ಸೌಲಭ್ಯವನ್ನು ಬಳಸಿಕೊಳ್ಳಬೇಕೆಂದು ಕೋರಲಾಗಿದೆ.

**ತಿ. ತಿ. ದೇ.**



# ತಿರುಮಲೆ ತಿರುಪತಿ ದೇವಸ್ಥಾನಗಳು

**ತಿರುಪತಿ**

## ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

**ಎಸ್. ರಮೇಶ್‌ಕುಮಾರ್, ಐ.ಎ.ಎಸ್.,**
ಕಾರ್ಯನಿರ್ವಹಣಾಧಿಕಾರಿ.

ಪ್ರಿಯ ಭಕ್ತ ಬಂಧುಗಳೆ;

ಅನ್ನದಾನಕ್ಕಿಂತ ಇನ್ನು ಚೆನ್ನಾದ ಉನ್ನತವಾದ ದಾನ ಮತ್ತೊಂದಿಲ್ಲ. ಹಸಿದು ಬಂದವರಿಗಶನವೀಯುವುದು ನಮ್ಮ ದೇಶದಲ್ಲಿ ಒಂದು ಸೇವೆ ಮಾತ್ರವೇ ಅಲ್ಲ; ವೇದಕಾಲದಿಂದ ಆಚರಣೆಯಲ್ಲಿರುವ ಪರಂಪರಾಗತ ಧರ್ಮವೂ ಆಗಿದೆ. ಆಹಾರವನ್ನು ನೀಡುವವರು ದೇವತೆಗಳೊಡನೆ ಸ್ಥಾನ ಪಡೆಯುವರೆಂದು ಹೇಳಲಾಗಿದೆ.

ತಿರುಮಲೆ ಯಾತ್ರಿಕರಿಗೆ ಉಚಿತವಾಗಿ ಹಾಗೂ ಪೂರ್ಣವಾಗಿ ಭೋಜನ ನೀಡುವ ಉದ್ದೇಶದಿಂದ 1985 ರಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳಿಂದ ಆರಂಭಿಸಲ್ಪಟ್ಟ ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನಯೋಜನೆಯು ಶೋಭಾಕರವಾದ ಯಶಸ್ಸು ಪಡೆದಿದೆ. ಭಾರತಾದ್ಯಂತದ ದಾನಿಗಳಿಂದ ಈ ಯೋಜನೆಯ ಬಗ್ಗೆ ಅತ್ಯುತ್ಸಾಹ ಕಂಡು ಬರುತ್ತಿದೆ.

ಭೋಜನದ ಗುಣಮಟ್ಟವೂ, ಉತ್ಕೃಷ್ಟತೆಯೂ, ಸಾರ್ವಜನಿಕರ ಶ್ಲಾಘನೆಗೆ ಪಾತ್ರವಾಗಿದೆ. ಈ ವಿಶಿಷ್ಟವಾದ ಅನ್ನದಾನಯೋಜನೆಯ ಸಂತಸಕರ ಫಲವನ್ನು ತಿರುಮಲೆಯ ಬಹುತೇಕ ಯಾತ್ರಿಕರು ಹೊಂದುತ್ತಿದ್ದಾರೆ.

ನಿತ್ಯ ಅನ್ನದಾನಯೋಜನೆಯಲ್ಲಿ, ಶ್ರೀ ಸಾಮಾನ್ಯ ಭಕ್ತರೂ ತಮ್ಮ ಯಥಾಶಕ್ತಿ ವಂತಿಗೆಯನ್ನು ಸಲ್ಲಿಸುವುದರ ಮೂಲಕ, ಪಾಲುಗೊಳ್ಳುವಂತೆ ಮಾಡಬೇಕೆಂದು ಯೋಚಿಸಿ, ಈ ವಂತಿಗೆಯ ಮೊತ್ತವನ್ನು ಸಾಕಷ್ಟು ಕಡಿಮೆ ಮಾಡಲು ತಿ. ತಿ. ದೇವಸ್ಥಾನಗಳು ಈಚೆಗೆ ನಿರ್ಧರಿಸಿದೆ. ತಾವು ರೂ. 1000/- ಅಥವಾ ಗುಣಕಗಳಲ್ಲಿ ದಾನ ಮಾಡಿದರೂ ಸಾಕು; ಉನ್ನತ ಹಾಗೂ ಅರ್ಹವಾದ ಕಾರ್ಯದಲ್ಲಿ ನೆರವು ನೀಡಿದಂತಾಗಿ ಆ ಮೂಲಕ ಕಾಲಾತೀತ ಪರಂಪರೆಯಾದ ಅನ್ನದಾನಯೋಜನೆಯನ್ನು ತಿ.ತಿ.ದೇ. ಉಳಿಸಿಕೊಂಡು ಮುಂದುವರೆಯುವಂತೆ ಮಾಡಿದವರಾಗುತ್ತೀರಿ.

ದೂರದೂರುಗಳಿಂದ ತಿರುಮಲೆಗೆ ಆಗಮಿಸುವ ಯಾತ್ರಿಕರ ಬಗ್ಗೆ ತಮ್ಮ ಹೃದಯ ಸಹಾನುಭೂತಿಯಿಂದ ಆರ್ದ್ರವಾಗುವಲ್ಲಿ, ಪರಿಷ್ಕೃತವಾದ ನಿತ್ಯ ಅನ್ನದಾನಯೋಜನೆಯಲ್ಲಿ ಸೇರಿ, ಈ ಪವಿತ್ರ ಸೇವೆಯಲ್ಲಿ ಭಾಗಿಗಳಾಗಿರಿ.

ಅನ್ನೇಶ್ರಿತಾನಿ ಭೂತಾನಿ ಅನ್ನಂ ಪ್ರಾಣಮಿತಿ ಶ್ರುತಿಃ
ತಸ್ಮಾದನ್ನಂ ಪ್ರದಾತವ್ಯಂ ಅನ್ನಂ ಹಿ ಪರಮಂ ಹವಿಃ
—ಬೋಧಾಯನ ಧರ್ಮಸೂತ್ರ.

ಒಳಶಕ್ತಿಯ ಜೀವಸತ್ವ ಆಹಾರ ಎಂದು ವೇದಗಳು ಘೋಷಿಸುತ್ತಿವೆ. ಅನ್ನದಾನ, ಭೌತಿಕ ಗುಣಗಳನ್ನು ಮೀರಿ ನಿಲ್ಲುವ ಅಮೂಲ್ಯ ಕ್ರಮವಾಗಿದೆ. ಹಾಗಾಗಿ ಅನ್ನದಾನ ಮಾಡಬೇಕು.

ವಂದನೆಗಳೊಡನೆ ತಮ್ಮ ವಿಶ್ವಾಸಿ,
**ಎಸ್. ರಮೇಶ್‌ಕುಮಾರ್**

# ಶ್ರದ್ಧೆಗೆ ಪೂರಕ - ದೇವರ ಪೂಜೆ

---ಎಸ್. ರೋಹಿಣೀ ಶರ್ಮ.

ಯಂ ಶೈವಾಸಮುಪಾಸತೇ ಶಿವ ಇತಿ
ಬ್ರಹ್ಮೇತಿ ವೇದಾಂತಿನೋ
ಬೌದ್ಧಾ ಬುದ್ಧ ಇತಿ ಪ್ರಮಾಣ ಪಟವಃ
ಕರ್ತೇತಿ ನೈಯ್ಯಾಯಿಕಾಃ
ಅರ್ಹನ್ನಿತ್ಯಥ ಜೈನ ಶಾಸನ ರತಾಃ
ಕರ್ಮೇತಿ ಮೀಮಾಂಸಕಾಃ
ಸೋಯಂ ವೋ ವಿದಧಾತು ವಾಂಛಿತ ಫಲಂ
ತ್ರೈಲೋಕ್ಯನಾಥೋ ವಿಭುಃ

ವೇದಾಂತಿಗಳು ಬ್ರಹ್ಮನೆಂದೂ ಶೈವರು ಶಿವನೆಂಬುದಾಗಿಯೂ ಬೌದ್ಧರು ಬುದ್ಧನೆಂಬುದಾಗಿಯೂ...... ಭಗವಂತನನ್ನು ಆರಾಧಿಸುತ್ತಾರೆ. ಆ ಭಗವಂತನಾದರೋ ಸರ್ವಶಕ್ತ. ನಿರಾಮಯ ಜಗನ್ನಿಯಾಮಕ ಹಾಗೂ ಧ್ಯಾನಗಮ್ಯ, ಜ್ಞಾನಗಮ್ಯ ಸರ್ವಸ್ವವೂ ಅವನದೇ.

ನಾವು ತಿನ್ನುವ ಆಹಾರ, ಕುಡಿಯುವ ನೀರು ಸೇವಿಸುವ ಗಾಳಿ - ನೋಡುವ ದೃಶ್ಯ ಬದುಕುವ ಬೆಳಕೆಲ್ಲದರಲ್ಲೂ ಅವನ ಛಾಯೆ ಇದೆ. ಇಂಥ ಅವನ ಅವ್ಯಕ್ತ ಶಕ್ತಿಯೇ ಭಕ್ತನ ಭಕ್ತಿಗೆ ಮೂಲ. ಭಕ್ತ - ಭಗವಂತನನ್ನು ಒಲಿಸುವ ಪರಿ ವಿಧವಿಧವಾದುದು ಆತ ಕೆಲವೊಂದು ಆಚರಣೆಗಳನ್ನು ಅನುಷ್ಠಾನಕ್ಕೆ ತಂದುಕೊಂಡು ಅವನ ಶ್ರೀರಕ್ಷೆಯಲ್ಲಿಯೇ ಬದುಕುತ್ತಿದ್ದಾನೆ. ಆ ಅನುಷ್ಠಾನದಲ್ಲಿ "ಪೂಜೆ"ಯೂ ಒಂದು.

"ಪೂಜೆ" - ಭಗವಂತ ಮತ್ತು ಭಕ್ತನಿಗೆ ನೇರ ಸಂಬಂಧವನ್ನು ಕಲ್ಪಿಸುವ ಸೇತುವೆ. ಪೂಜೆಯಲ್ಲಿ ಭಗವಂತನಿಗೇ ಪೂಜ್ಯಸ್ಥಾನ. ಜಾತಿ - ಮತ - ಪಂಥ - ಪಂಗಡಗಳ ಗುಂಪುಗಾರಿಕೆ ಈ ಪೂಜೆಗಿಲ್ಲ. "ಅವರವರ ದರುಶನಕೆ, ಅವರವರ ಭಕುತಿಗೆ ಇರುತಿಹನು ಶಿವಯೋಗಿ" ಎನ್ನುವಂತೆ ಒಂದೊಂದು ಮತದಲ್ಲಿ ಒಂದೊಂದು ಪೂಜಾವಿಧಿಗಳಿವೆ. ಎಲ್ಲವೂ ನೇರವಾಗಿ ಭಗವಂತನಿಗೇ ಸಲ್ಲುತ್ತದೆ.

ಆರಾಧನೆ, ಅರ್ಚನೆ, ನಮಸ್ಯಾ ಅಪಚಿತಿ, ಸಪರ್ಯಾ ಅರ್ಚಾ, ಅರ್ಹಣ ಮುಂತಾದ ಪರ್ಯಾಯ ಶಬ್ದಗಳನ್ನು ಪೂಜೆಗೆ ಸೂಚಿಸುತ್ತಾರೆ. ಭಗವಂತನನ್ನು ದರ್ಶನ, ಸ್ತುತಿ, ಸ್ಮರಣೆ, ನಾಮ ಸಂಕೀರ್ತನ, ಗುಣವರ್ಣನೆ, ಕಥಾಶ್ರವಣ ಮುಂತಾದ ಕ್ರಿಯಾವಿಧಾನಗಳಿಂದಲೂ ಪೂಜಿಸಬಹುದು. ದೇವರ ಪೂಜೆ ಒಂದು ಯಜ್ಞವಾದ್ದರಿಂದ ಅವರವರ ಗುರುವಿನ ಮಾರ್ಗದರ್ಶನದಂತೆ ಪೂಜೆಯನ್ನು ಮಾಡಬೇಕು.

ಪೂಜೆಯಲ್ಲಿ ಮಾನಸಪೂಜೆ, ಕಾಮ್ಯಪೂಜೆ ಎಂಬುದಾಗಿ ಎರಡುವಿಧ. ಮಾನವ, ದೈವ, ಗುರು, ಆಚಾರ್ಯರು ಮಹಾತ್ಮರು. ಅತಿಥಿಗಳನ್ನು ಸತ್ಕರಿಸುವುದು ಮಾನಸ ಪೂಜೆಯಾದರೆ ದೇವರ ವಿವಿಧ ಮೂರ್ತಿಗಳನ್ನು (ಅದರಲ್ಲಿ ಸಾಲಿಗ್ರಾಮ, ಲಿಂಗ, ಕಳಸ ಕಲ್ಲಿನ ಮೂರ್ತಿಗಳೂ ಸೇರುತ್ತವೆ) ಉದ್ದೇಶಿಸಿ ಮಾಡುವುದು ದೈವಪೂಜೆ ಎಂದು ಹೆಸರು. ಇದರಲ್ಲಿ ನಿತ್ಯ ನೈಮಿತ್ತಿಕ, ಕಾಮ್ಯಪೂಜೆ ಎಂಬುದಾಗಿ ಮೂರು ವಿಧವಾಗಿ ವಿಗಂಡಿಸಬಹುದು. ದೈನಂದಿನ ಪೂಜೆ ನಿತ್ಯಪೂಜೆ, ವಿಘ್ನನಿವಾರಣಕ್ಕಾಗಿ ಕಾರ್ಯಾರಂಭದಲ್ಲಿ ಮಾಡುವ ಪೂಜೆ ನೈಮಿತ್ತಿಕವಾಗಿದ್ದು ವಿದ್ಯಾಧಿದೇವತೆ ಹಯಗ್ರೀವ ಮುಂತಾದ ನಿಮಿತ್ತದಿಂದ ಮಾಡುವ ಪೂಜೆಯೇ "ನೈಮಿತ್ತಿಕ" ನಿರ್ದಿಷ್ಟವಾದ ಗುರಿ, ಫಲಾಪೇಕ್ಷೆಯಿಂದ ಮಾಡುವ ಪೂಜೆ "ಕಾಮ್ಯ" ಇದರಲ್ಲಿ ಕೆಲವು ವ್ರತಗಳೂ ಸೇರುತ್ತವೆ.

ಪತ್ರಂ ಪುಷ್ಪಂ ಫಲಂ ತೋಯಂ
ಯೋ ಮೇ ಭಕ್ತ್ಯಾ ಪ್ರಯಚ್ಛತಿ
ತದಹಂ ಭಕ್ತ್ಯುಪ ಹೃತಂ
ಅಶ್ನಾಮಿ ಪ್ರಯತಾತ್ಮನಃ

ಭಗವದ್ಗೀತೆ (೯ನೆಯ ಅಧ್ಯಾಯ ೨೬)ಯಲ್ಲಿ ಹೇಳಿರುವಂತೆ ಭಕ್ತನು ಭಕ್ತಿಯಿಂದ ಒಂದು ಎಲೆ, ಒಂದು ಹೂವು, ಒಂದು ಹಣ್ಣು, ಸ್ವಲ್ಪ ನೀರು ಇವುಗಳನ್ನು ಅರ್ಪಿಸಿದರೆ ಸಾಕು ನಾನು ಅದನ್ನು ಉಣ್ಣುತ್ತೇನೆ ಎಂಬುದಾಗಿ ಪರಮಾತ್ಮನುಡಿದಿದ್ದಾನೆ.

ಅದೇ ಭಾಗವತದಲ್ಲಿ--

ಶ್ರದ್ಧಯೋ ಪಾಹೃತಂ ಪ್ರೇಷ್ಠಂ
ಭಕ್ತೇನ ಮಮ ವಾರ್ಯಪಿ
ಭೂರ್ಯಪ್ಯ ಭಕ್ತೋಪಹೃತಂ
ನ ಮೇ ತೋಷಾಯ ಕಲ್ಪತೇ

ಭಕ್ತಿ ಇಲ್ಲದವನು ಧನ - ಕನಕ, ದ್ರವ್ಯಗಳನ್ನು ಹೇರಿದರೂ ನಾನು ಸಂತುಷ್ಟನಾಗಲಾರೆ. ಭಕ್ತಿಯುಳ್ಳ ನಿರ್ಗತಿಕನೇ ಆಗಿರಲಿ ಬರಿನೀರನ್ನಾದರೂ ಶ್ರದ್ಧೆಯಿಂದ ಅರ್ಪಿಸಿದರೆ ಸಾಕು ಸಂತುಷ್ಟನಾಗುತ್ತೇನೆ ಎಂದಿದೆ. ಆದ್ದರಿಂದಲೇ ಪೂಜೆ ಮಾಡುವಾಗ ಕೃಷ್ಣಾರ್ಪಣ, ಶಿವಾರ್ಪಣ ಎಂದು ಅರ್ಘ್ಯ ನೀಡುತ್ತೇವೆ.



ಮಹಾಭಾರತದಲ್ಲಿ ದೂರ್ವಾಸಾತಿಥ್ಯದ ಪ್ರಸಂಗದಲ್ಲಿ ಬರುವ ದ್ರೌಪದಿ ಒಂದು ಎಲೆಯ ಚೂರನ್ನು ಅರ್ಪಿಸಿದಳು, ಒಂದು ತಾವರೆ ಹೂವನ್ನು ಅರ್ಪಿಸಿದ ಗಜೇಂದ್ರನ ಭಕ್ತಿ ಭಾಗವತದಲ್ಲಿ ಬಂದರೆ, ರಾಮಾಯಣದ ಅರಣ್ಯಕಾಂಡದಲ್ಲಿ ಬರುವ "ಕಚ್ಚಿ, ಕಚ್ಚಿ ರುಚಿನೋಡಿ" ಹಣ್ಣನ್ನು ಅರ್ಪಿಸಿದ ಶಬರಿ, ಭಾಗವತದಲ್ಲಿ ಬರುವ ಹನಿ ನೀರನ್ನೇ ಇತ್ತ ರಾಜಾ ರಂತಿದೇವ, ಕನಕದಾಸರ ಭಕ್ತಿಗೆ ಮೆಚ್ಚಿ ತನ್ನ ದೇಹವನ್ನೇ ತಿರುಗಿಸಿ ದರ್ಶನ ನೀಡಿದ ಉಡುಪಿಕೃಷ್ಣ -ಇಂಥ ಉದಾಹರಣೆ ನಮಗೆ ದೇಕಾದಷ್ಟು ಸಿಗುತ್ತವೆ. ಇಲ್ಲಿ ಆಡಂಬರ ಮುಖ್ಯವಲ್ಲ, ಭಕ್ತಿಯೇ ಪ್ರಧಾನ ಎಂಬುದು ಗಮನಾರ್ಹವಾದುದು.

ಭಗವಂತನು ಸರ್ವಾಂತರ್ಯಾಮಿ. ಆದರೆ ಅವನನ್ನು ಒಂದೊಂದು ಕಡೆಯಲ್ಲಿ ಒಂದೊಂದು ವಿಶಿಷ್ಟರೀತಿಯಲ್ಲಿ ಪೂಜಿಸಬೇಕೆಂದು ಶಾಸ್ತ್ರಗಳು ಹೇಳುತ್ತವೆ. ಆಯಾ ದೇವರುಗಳಿಗೆ ಸಂಬಂಧಿಸಿದ ಮಂತ್ರ - ತಂತ್ರಗಳಿಂದ ತ್ರಿಮೂರ್ತಿಗಳನ್ನು ಪೂಜಿಸಬೇಕು. ಸೂರ್ಯನನ್ನು ವೇದಮಂತ್ರಗಳಿಂದ ಸ್ತುತಿಸಿ ನಮಸ್ಕಾರ ರೂಪದಲ್ಲೂ ಅಗ್ನಿಯನ್ನು ತುಪ್ಪ, ಅನ್ನ ಮುಂತಾದ ಹವಿಸ್ಸುಗಳಿಂದಲೂ, ಜ್ಞಾನಿಗಳನ್ನು ಆತಿಥ್ಯದಿಂದಲೂ, ಹಸುವಿಗೆ ಹುಲ್ಲು ನೀರು ನೀಡಿದರೆ, ಭಗವಂತನ ಭಕ್ತನನ್ನು ಬಂಧುವಿನಂತೆ ಸತ್ಕರಿಸಬೇಕು. ಗಂಧ ಹೂಗಳಿಂದ ನೀರು, ನೆಲ, ಯಂತ್ರವನ್ನು ನೆಲದ ಮೇಲೂ ಪ್ರತಿಷ್ಠಾಪಿಸಿ, ಎಲ್ಲಾ ಆತ್ಮ ಪ್ರಾಣಿಗಳನ್ನು ತಕ್ಕ ಉಪಚಾರಗಳಿಂದ ಪೂಜಿಸಬೇಕು.

ವಿಘ್ನನಾಶಕ್ಕೆ ಗಣಪತಿ, ಪಾಪನಿವಾರಣೆಗೆ ಸೂರ್ಯ, ಶುದ್ಧಿಗೆ ಅಗ್ನಿ, ಮುಕ್ತಿಗೆ ವಿಷ್ಣು, ಜ್ಞಾನ ಪ್ರಾಪ್ತಿಗೆ ಶಿವ, ಬುದ್ಧಿ ವೃದ್ಧಿಗೆ ಪಾರ್ವತಿ ಇವರುಗಳೇ ಪೂಜೆಗೆ ಅರ್ಹರೆಂದು ಬ್ರಹ್ಮವೈವರ್ತ ಪುರಾಣದಲ್ಲಿ ತಿಳಿಸಿದೆ.

ಆ ಭಗವಂತನನ್ನು ಭಕ್ತನಿಂತಿರುವಂತೆ, ಕುಳಿತಿರುವಂತೆ, ಮಲಗಿರುವಂತೆ - ಹೀಗೆ ಇದು ವಿವಿಧ ರೂಪದಲ್ಲಿ ಪೂಜಿಸುತ್ತಾರೆ. ಲಿಂಗ, ಪುಸ್ತಕ, ಸ್ಥಂಡಿಲ, ಪಾದುಕ, ಪ್ರತಿಮಾ, ಚಿತ್ರ, ಅಗ್ನಿ, ಖಡ್ಗ, ಜಲ ಇವುಗಳಲ್ಲಿ ದೇವಿ ಆವಾಹನೆ ಮಾಡಿಯೂ ಪೂಜಿಸುತ್ತಾರೆ.

ಪೂಜೆಯನ್ನು ಮುಖ್ಯವಾಗಿ ಹದಿನಾರು ಉಪಚಾರಗಳಿಂದ (ಇದು ಷೋಡಶೋಪಚಾರ ಪೂಜೆ) ಪೂಜಿಸಬೇಕು. ಅನುಕೂಲ - ಅವಕಾಶ ಇರುವ ಮಠ - ದೇವಾಲಯಗಳಲ್ಲಿ ತ್ರಿಕಾಲ ಪೂಜೆ ನಡೆಯುವುದಾದರೂ ಸಾಮಾನ್ಯವಾಗಿ ಗೃಹಸ್ಥನಾದವನು ದಿನಕ್ಕೆ ಎರಡು ಬಾರಿಯಾದರೋ, ಕೊನೇ ಪಕ್ಷ ಒಂದು ಬಾರಿಯಾದರೂ ಪೂಜೆ ಮಾಡುವ ನಿಯಮ ಇಟ್ಟುಕೊಳ್ಳಬೇಕು.

## ಆಚರಿಸಲೇ ಬೇಕಾದ ನಿಯಮಗಳು

ಪೂಜಕನು ಪೂಜಾಗೃಹವನ್ನು ಪೂಜಾ ವಸ್ತುಗಳನ್ನು ಶುದ್ಧಿಗೊಳಿಸಿ ಶೌಚ, ಸ್ನಾನ, ಶುಭ್ರ ವಸ್ತ್ರಧಾರಣೆ ಹಾಗೂ ಭಸ್ಮದಿಂದ ದೇಹಾಲಂಕಾರ ಭೂಷಿತನಾಗಿ ಪೂರ್ವಾಭಿಮುಖ ಅಥವಾ ಉತ್ತರಾಭಿಮುಖವಾಗಿ ಕುಳಿತು, ಕಾಮ, ಕ್ರೋಧ, ರಾಗ, ಭಯ, ಮಾತ್ಸರ್ಯರಹಿತನಾಗಿ ಶುದ್ಧ ಮನಸ್ಸಿನಿಂದ ದೇವರನ್ನು ಭಜಿಸಬೇಕು. ದೇಶ, ಕಾಲ, ಉದ್ದೇಶಗಳನ್ನಿಟ್ಟುಕೊಂಡು ಸಂಕಲ್ಪಮಾಡಿಕೊಂಡು ಪ್ರತಿಮೆಗೆ ಇಷ್ಟದೇವತೆಯನ್ನು ಮಂತ್ರ, ಧ್ಯಾನ, ನ್ಯಾಸಗಳಿಂದ ಆವಾಹನೆ ಮಾಡಬೇಕು.

ಕಾಲುಗಳಿಗೆ ಪಾದ್ಯ, ಕೈಗಳಿಗೆ ಅರ್ಘ್ಯ ಮುಖಕ್ಕೆ ಆಚಮನೀಯವೆಂದು ನೀರನ್ನು ಅರ್ಪಿಸಲಾಗುವುದು. "ಓಂ ನಮಃ ಇತಿ" ಎಂಬುದಾಗಿ ದೇವತೆಯ ಮಂತ್ರವನ್ನು ಪಠಿಸಿ ಸರ್ವಾಂತರ್ಯಾಮಿ ಎಂದು ಹೇಳಿ ಸಲ್ಲಿಸಲಾಗುವುದು. ಆ ಭಗವಂತನಿಗೆ ಮೊಸರು, ಹಾಲು, ತುಪ್ಪ, ಜೇನುತುಪ್ಪಗಳ ಮಿಶ್ರಣವನ್ನು ಉಪಹಾರವಾಗಿ ಅರ್ಪಿಸಲಾಗುವುದು. ಹಾಲು, ಮೊಸರು, ತುಪ್ಪ, ಜೇನುತುಪ್ಪ ಸಕ್ಕರೆ ಬೆರಸಿದ ಪಂಚ ಅಮೃತಗಳಿಂದಲೂ, ಜಲಧಾರದಿಂದಲೂ ಅಭಿಷೇಕ ಮಾಡಬೇಕು. ಕುಂಭ ಅಥವಾ ಕಳಸದಿಂದ ಶುದ್ಧವಾದ ನೀರನ್ನು ತುಂಬಿಸಿ ಈ ನೀರಿಗೆ ಗಂಧ, ಪುಷ್ಪ, ಹೂವು ಪತ್ರ ಮುಂತಾದವುಗಳನ್ನು ಸೇರಿಸಿ ದೇವತೆಗಳನ್ನು ಪೂಜಿಸಲಾಗುವುದು. ಶಂಖ ಅಥವಾ ಗೋವಿನ ಕೊಂಬಿನಲ್ಲಿ ನೀರನ್ನು ತುಂಬಿ ಸ್ನಾನ ಮಾಡಿಸುವರು. ಸ್ನಾನ ಮಾಡಿಸುವಾಗ ಗಂಟೆ ಬಾರಿಸುತ್ತಾ ಮಂತ್ರ, ಸ್ತೋತ್ರಗಳನ್ನು ಪಠಿಸಬೇಕು. ಸ್ನಾನಾನಂತರ ವಸ್ತ್ರ, ಉಪವೀತ, ಆಭರಣಗಳ ಅಲಂಕಾರ. ಅನಂತರ ಗಂಧಹಚ್ಚಿ ಹೂವು ಮತ್ತು ಪತ್ರೆಗಳಿಂದ ನೂರಾಎಂಟರಿಂದ ಸಾವಿರನಾಮಗಳನ್ನು ಹೇಳುತ್ತಾ ಅರ್ಚಿಸಬೇಕು. ಅಲಂಕಾರ

ಮಾಡುವಾಗ ಆಯಾ ದೇವರಿಗೆ ಏನು ಪ್ರೀತಿಯೋ ಅಂಥದ್ದನ್ನೇ ಮಾಡಬೇಕು. "ಅಲಂಕಾರಪ್ರಿಯೋ ವಿಷ್ಣು......" ಎನ್ನುವಂತೆ ವಿಷ್ಣುವಿಗೆ ತುಳಸಿ, ಗಣಪತಿಗೆ ಗರಿಕೆ, ಶಿವನಿಗೆ ಬಿಲ್ವಪತ್ರೆ ಶ್ರೇಷ್ಠ. ಆ ಮೇಲೆ ಮುಖವಸ್ತ್ರ ದಕ್ಷಿಣೆ ಸಹಿತ ತಾಂಬೂಲ, ಕನ್ನಡಿ ಛತ್ರಿ, ಚಾಮರ ಮತ್ತು ಪಾದುಕೆ ಇವುಗಳನ್ನು ಸಮರ್ಪಣೆ - ಪ್ರದಕ್ಷಿಣೆ ನಮಸ್ಕಾರ, ಸ್ತುತಿ, ಪ್ರಾರ್ಥನೆ ಮುಂತಾದ ಅನೂಪಚಾರ ಸೇವೆ ಮಾಡಬೇಕು. ಪೂಜೆಯಲ್ಲಿ ಅರಿತೋ ಅರಿಯದೆಯೋ ಆದ ಲೋಪದೋಷಗಳ ಪ್ರಾಯಶ್ಚಿತ್ತವಾಗಿ ಸ್ವಲ್ಪ ಜಪಮಾಡಿ ಪೂಜೆ ಸಫಲವಾಗಲೆಂದು ಹೂವು ನೀರುಗಳಿಂದ ಪ್ರಸನ್ನ ಅರ್ಘ್ಯವನ್ನು ಅರ್ಪಿಸಲಾಗುವುದು.

ದೇವರ ಪೂಜೆಯಲ್ಲಿ ಉಪಚಾರ ಬಹುಮುಖ್ಯವಾದ ಹಾಗೆ ಶಕ್ತಿಪೂಜೆಯಲ್ಲಿ ಆಸನ ಪ್ರಧಾನದಿಂದ ಪ್ರಾರಂಭಿಸಿ ನಮಸ್ಕಾರ ಮಾಡುವವರೆಗೆ ಅರವತ್ನಾಲ್ಕು ಉಪಚಾರಗಳನ್ನು ಸಮರ್ಪಿಸಬೇಕು.

ಗೃಹಪೂಜೆ - ಆಲಯಪೂಜೆಯೆಂದು ಪೂಜೆಯಲ್ಲಿ ಮತ್ತೆರಡುವಿಧ. ಗೃಹಸ್ಥ ತನ್ನ ಮನೆಯಲ್ಲಿ ತನ್ನ ಕುಟುಂಬದ ಶ್ರೇಯಸ್ಸಿಗಾಗಿ ಆಚರಿಸುವ ಪೂಜೆ ಗೃಹಪೂಜೆಯಾದರೆ ಸಾಮೂಹಿಕವಾಗಿ ಲೋಕಕಲ್ಯಾಣಾರ್ಥವಾಗಿ ದೇವಾಲಯದಲ್ಲಿ ದೇವರನ್ನು ಪ್ರತಿಷ್ಠಾಪಿಸಿ ಪೂಜಿಸುವುದು ಆಲಯ ಪೂಜೆ. ದೇವಾಲಯದಲ್ಲಿ ನಿರ್ದಿಷ್ಟವಾದ ವರ್ಗಕ್ಕೆ ಸೇರಿದವರೇ ಪೂಜೆ ಮಾಡಬೇಕು. ಇವರನ್ನು "ಆಗಮಿಕರು" ಎನ್ನುತ್ತಾರೆ. ದೇವಾಲಯ ಪೂಜಾ ವಿಧಿ ವಿಧಾನಕ್ಕೆ ಆಗಮಿಕ ಗ್ರಂಥಗಳೇ ಇವೆ.

## ಪೂಜೆಗೆ ಇರಬೇಕಾದ ಅರ್ಹತೆಗಳು

ರಾತ್ರಿಯಲ್ಲಿ ತೆಗೆದಿಟ್ಟ ನೀರನ್ನು ಪೂಜೆಗೆ ಬಳಸದೆ, ಸ್ನಾನ - ಸಂಧ್ಯಾವಂದನೆ, ಜಪತಪದಿಂದ ಶುದ್ಧವಾದ ಆಗತಾನೇ ಸಂಗ್ರಹಿಸಿದ ನೀರನ್ನು ಬಳಸಬೇಕು. ಪೂಜೆಯನ್ನು ಮನೆಯ ಯಜಮಾನನೇ ಮಾಡುವುದು ಉತ್ತಮ. ಸುಲಭವಾಗಿ ಸಿಗುವ ಸರಳ, ಸುಂದರ, ಪವಿತ್ರ ವಸ್ತುಗಳಿಂದಲೇ ಉನ್ನತ ಮಟ್ಟದ ಪೂಜೆ ನಡೆಸಬೇಕು. ಪ್ರತಿದಿನ ಹಣ ಕೊಟ್ಟು ಹೂತಂದು ಪೂಜಿಸುವುದಕ್ಕಿಂತ ಇದ್ದಜಾಗದಲ್ಲೆ ಶ್ರದ್ಧೆಯಿಂದ ಹೂಗಿಡ ಬೆಳೆದು ಪೂಜೆಗೆ ಬಳಸಬೇಕು. ಬೇರೆಯವರ ಮನೆಯಿಂದ ಹೂಕದ್ದು ಆ ಮನೆ ಯಜಮಾನನಿಂದ ಬೈಗುಳ ತಿನ್ನುವುದಕ್ಕಿಂತಲೂ ಹೂಸಿಗದಿದ್ದಾಗ ಬೇಸರಿಸದೆ ಭಕ್ತಿಯನ್ನೇ ಸಮರ್ಪಿಸಿದರೆ ಅದಕ್ಕಿಂತ ಶ್ರೇಷ್ಠವಾದದ್ದು ಬೇರೆ ಇಲ್ಲ.

ಅಶುಚಿಯಾದವರು ಪೂಜೆ ಮಾಡಬಾರದು. ತೀರ್ಥಕ್ಷೇತ್ರದಲ್ಲಿ ಮಾಡುವ ಪೂಜೆ ಅತಿ ಶ್ರೇಷ್ಠ. ಪೂಜೆಗೆ ಬಳಸುವ ಆಸನಕೂಡ ಇಲ್ಲಿ ಗಣನೀಯವಾದುದು. ಕಾಷ್ಠಾಸನದಿಂದ ಪೂಜೆ ವ್ಯರ್ಥ. ಪಾಷಾಣಾಸನದಿಂದ ರೋಗ ಸಂಭವ, ಭೂಮ್ಯಾಸನವಾದರೆ ನಿರ್ಗತಿಕತನ - ವಸ್ತ್ರಾಸನದಿಂದ ದಾರಿದ್ರ್ಯ. ಹಾಗಾದರೆ ಎಂಥ ಆಸನ ಶ್ರೇಷ್ಠ? ಪ್ರಶ್ನೆ ಸಹಜವಾದುದೆ. ಕುಶಾಸನದಿಂದ ಜ್ಞಾನವೃದ್ಧಿ, ಕಂಬಲಾಸನದಿಂದ ಉತ್ತಮ ಸಿದ್ಧಿ, ಕೃಷ್ಣಾಜಿನದಿಂದ ಧನ - ಸಂತಾನಪ್ರಾಪ್ತಿ, ವ್ಯಾಘ್ರಾಸನದಿಂದ ಮೋಕ್ಷಪ್ರಾಪ್ತಿ. ಆದ್ದರಿಂದ ಪೂಜಿಸುವ ಆಸನದ ಆಯ್ಕೆಯೂ ಅಷ್ಟೇ ಮುಖ್ಯ ಎಂಬುದನ್ನು ಮರೆಯಬಾರದು.

ಕಾರ್ತೀಕ ಮಾಸದಲ್ಲಿ ಅಖಂಡ ದೀಪಸೇವೆ - ಪುಷ್ಯಮಾಸದಲ್ಲಿ ನದೀಸ್ನಾನ - ಪಾಯಸ ನೈವೇದ್ಯ, ಮಾಧವೀ ಪುಷ್ಪಾರ್ಚನೆ, ಪಾಲ್ಗುಣಮಾಸದಲ್ಲಿ ವಕುಳ, ಚಂಪಕ, ಗುಡಾನ್ನನಿವೇದನೆ ಚೈತ್ರದಲ್ಲಿ ಕಮಲದಿಂದ ಪೂಜೆ ಮೊಸರನ್ನ ಮುಂತಾದ ಪುಷ್ಪ - ನೇವೇದ್ಯದಿಂದ, ಉಳಿದ ತಿಂಗಳಲ್ಲೂ ನಿರ್ದಿಷ್ಟವಾದ ಪೂಜೆ ಮಾಡಿದರೆ ವಿಶೇಷ ಫಲಗಳು ಲಭಿಸುತ್ತವೆ.

ಪೂಜೆ ಮುಗಿದ ನಂತರ ತೀರ್ಥಪ್ರಸಾದದ ವಿವರಣೆ ಕೊಡದಿದ್ದರೆ ಈ ಲೇಖನ ಅಪೂರ್ಣವೇ ಸರಿ. ತೀರ್ಥ ಎಂದರೆ ಅಭಿಷೇಕ ಮಾಡಿದ ನೀರು. ಇದರಲ್ಲಿ ಪುಣ್ಯನದಿಯ ನೀರು, ತಾಮ್ರದ ಪಾತ್ರೆ, ಶ್ರೀಗಂಧ, ಕೇಸರಿ, ಕರ್ಪೂರ ಮುಂತಾದ ಸುಗಂಧ ದ್ರವ್ಯಗಳು, ತುಳಸಿ ಬಿಲ್ವ ಮುಂತಾದ ವನಸ್ಪತಿಗಳು - ಶಿವಲಿಂಗ, ಸಾಲಿಗ್ರಾಮ, ಶಂಖ, ಗೋಶಂಖ - ಕಂಚಿನ ಗಂಟೆಯನಾದ, ವೇದ ಮುಂತಾದ ಎಂಟು ಅಂಶಗಳಿಂದ ಕೂಡಿದ ತೀರ್ಥವನ್ನು ಸೇವಿಸಬೇಕು. ತೀರ್ಥಸೇವನೆಗೂ ಆರೋಗ್ಯಕ್ಕೂ ನೇರಸಂಬಂಧ ಉಂಟು. ಶಂಖದಿಂದ ಬಿದ್ದರೇ ತೀರ್ಥ ಎಂಬ ಮಾತೂ ಇದೆ.

ಅಕಾಲ ಮೃತ್ಯುಹರಣಂ
ಅದಿವ್ಯಾಧಿ ವಿನಾಶನಂ
ಚಿಂತಾಶೋಕ ಪ್ರಶಮನಂ
ದೇವ ಪಾದೋದಕಂ ಶುಭಂ

ಎಂಬ ಮಂತ್ರವನ್ನು ಹೇಳುತ್ತಾ ಬರಿಯ ಹೊಟ್ಟೆಯಲ್ಲಿ ಮಿತ ಪ್ರಮಾಣದಲ್ಲಿ ಮೂರುಸಲ ಕುಡಿಯುವುದು. ಹಾಗೇ ತಲೆಮೇಲೆ ಸಿಂಪಡಿಸಿಕೊಳ್ಳಬೇಕು. ಈ ಫಲವು ನಿಶ್ಚಿತವಾಗಿಯೂ ನನಗೆ ಲಭಿಸಲಿ ಎಂದು ಹೇಳುತ್ತ ವಿಶ್ವಾಸದಿಂದ ತೀರ್ಥಕುಡಿಯಬೇಕು. ತೀರ್ಥ ಎಂದರೆ ಪವಿತ್ರವಾದ ಜಲ - ನೈರ್ಮಾಲ್ಯ, ವೇದಾಂತಿಕವಾಗಿ ತೀರ್ಥಕ್ಕೆ ಗುರುಹಿರಿಯರು, ಆಚಾರ್ಯರು ಶಾಸ್ತ್ರ ಎಂದೂ ಈ ಸಂಸಾರ ಸಾಗರವನ್ನು ಸುಲಭವಾಗಿ ದಾಟುವ ಉಪಾಯ ಎಂದೂ ಅರ್ಥಗಳಿವೆ. ಬಲ ಅಂಗೈ ಕೆಳಗೆ ಎಡ ಅಂಗೈ ಇಟ್ಟು ಬೆರಳುಗಳನ್ನೆಲ್ಲಾ ಸೇರಿಸಿ ದೋಣಿ ಆಕಾರದಲ್ಲಿ ತೀರ್ಥ ತೆಗೆದುಕೊಳ್ಳಬೇಕೆಂಬುದು ಶಾಸ್ತ್ರಕಾರರ ಅಭಿಪ್ರಾಯ.

## ಪ್ರಸಾದ

ನಮ್ಮ ಇಷ್ಟದೇವತೆಯು ತನ್ನ ಪೂಜೆಯನ್ನು ಮನಸ್ಸಿ ಸ್ವೀಕರಿಸಿ ನಮಗೆ ಅನುಗ್ರಹಿಸಿದ ಫಲವೇ ಪ್ರಸಾದ ಎಂದು ತಿಳಿದು ಸ್ವೀಕರಿಸಬೇಕು. ಹಣ್ಣೇ ಇರಲಿ, ಮಿಠಾಯಿ ಇರಲಿ, ಪಾಯಸವಿರಲಿ, ಪ್ರಸಾದ ಪ್ರಸಾದವೇ. ರಸಾಯನ, ಪಾಯಸ, ಪಂಚ ಭಕ್ಷ್ಯಭೋಜ್ಯಗಳು ದೇವರಿಗೆ ಪ್ರೀತ್ಯರ್ಥವಾದುದು. ಪೂಜೆ ಮುಗಿದ ಮೇಲೆ ಭಕ್ತನು ಹತ್ತಿರ ಇರುವ ಯಾರಿಗಾದರೂ ಪ್ರಸಾದ ಕೊಟ್ಟು ತಾನು ತೆಗೆದುಕೊಂಡರೆ ಪೂಜೆ ಮಾಡಿದ ಫಲವು ಸಿಗುತ್ತದೆ.

ಪೂಜೆ ಎಂದರೆ ಸುಮ್ಮನೆ ಸಮಯವನ್ನು ಕೊಲ್ಲುವ ಸಾಧನವೆಂದು ನಾಸ್ತಿಕರು ಭಾವಿಸಿದರೆ ಆಸ್ತಿಕರು ಸರ್ವಶಕ್ತನಾದ ಭಗವಂತನನ್ನು ಪೂಜೆ ಮೂಲಕ ಅರ್ಚಿಸಿದರೆ ಸರ್ವವನ್ನೂ ಕೊಡುವ ಕೊಡುಗೈ ಎಂದೇ ಆರಾಧಿಸುತ್ತಾರೆ. ಪೂಜೆ ಅರ್ಥಹೀನವಾದ ಯಾಂತ್ರಿಕ ಕ್ರಿಯೆ ಖಂಡಿತ ಅಲ್ಲ. ವಿಚಾರ ಹೀನವಾದ ಮೂಢನಂಬಿಕೆಯ ವಿಜೃಂಭಣೆಯೂ ಅಲ್ಲ. ಅದು ನಮ್ಮ ಭಾವನೆ, ಕಲೆ, ಸಂಕೇತ, ಗಂಭೀರವಾದ ಆಧ್ಯಾತ್ಮಿಕ ತತ್ವಗಳ ಸಮರಸವಾದ ಸಮನ್ವಯ ಎಂದರೆ ಖಂಡಿತತಪ್ಪಾಗಲಾರದು. ಅಂತೆಯೇ ಪೂಜೆಯಲ್ಲಿ ಬಳಸುವ ದೀಪ, ಗಂಟೆ, ಕಲಶ, ಶಂಖಗಳು ಒಳ್ಳೆ ಕಲಾಕೃತಿಯ ಬಿಂಬವಾದರೆ ಮಂಟಪ ಮತ್ತು ಪೂಜಾಲಂಕಾರಗಳು ಕಲಾತ್ಮಕವಾದುದೂ ಆಗಿವೆ. ಕಂಚಿನ ಗಂಟೆ, ತಾಳ, ಜಾಗಟೆಗಳ ಸುನಾದ, ಮಂತ್ರ - ಸ್ತೋತ್ರಗಳ ಸ್ಪಷ್ಟ ಸ್ವರೋಚ್ಚಾರಗಳು ಪವಿತ್ರವಾದ ವಾತಾವರಣವನ್ನೇ ನಿರ್ಮಿಸಬಲ್ಲದು.

ಮಂಗಲಕರವೆಂದು ಬೆಳಗುವ ಮಂಗಲಾರತಿ, ಸ್ತುತಿ, ಜಯಘೋಷಗಳು ಭವ್ಯವಾದ ರಮ್ಯವಾದ ಮಹೋನ್ನತವಾದ ಭಾವಲೋಕದಲ್ಲಿ ವಿಹರಿಸುವಂತೆ ಮಾಡುವುದು. ಇಂಥ ಪೂಜೆಯ ಹಿನ್ನೆಲೆ - ಆಚರಣೆಗಳನ್ನು ಅರಿತು - ಆರಾಧಿಸಿದರೆ ಪ್ರತಿಯೊಬ್ಬ ಮಾನವನಿಗೂ ಕ್ಷೇಮ. ಲೋಕಕ್ಕು ಕಲ್ಯಾಣ ಎಂಬುದನ್ನು ಮರೆಯಬಾರದು.

## ತಿರುಮಲೆ -- ತಿರುಪತಿ ದೇವಸ್ಥಾನಗಳು -- ತಿರುಪತಿ.

# ಶ್ರೀ ಬಾಲಾಜಿ ಆರೋಗ್ಯ ವರಪ್ರಸಾದಿನಿ ಯೋಜನೆ

ಶ್ರೀ ವೆಂಕಟೇಶ್ವರಸ್ವಾಮಿಯ ಸನ್ನಿಧಿಯಿರುವ ತಿರುಮಲೆ ಪ್ರಾಚೀನ ಕಾಲದಿಂಲೂ ಯಾತ್ರಿಕರ ಆಕರ್ಷಣಕೇಂದ್ರವಾಗಿದೆ. ಪ್ರತಿದಿನವೂ ಸಾವಿರಾರು ಮಂದಿ ಭಕ್ತ ಯಾತ್ರಿಕರು ತಮ್ಮ ಐಹಿಕ ಆಧ್ಯಾತ್ಮಿಕ ಅಭಿವೃದ್ಧಿಗಾಗಿ ಇಲ್ಲಿ ಪ್ರಾರ್ಥನೆಯನ್ನು ಸಲ್ಲಿಸುತ್ತಾರೆ.

ತಿ. ತಿ. ದೇವಸ್ಥಾನಗಳು ಮಾನವಸೇವೆಯಲ್ಲಿ ಶ್ರದ್ಧಾಪೂರ್ವಕವಾಗಿ ಭಾಗವಹಿಸುವ ಪರಂಪರೆಯನ್ನು ಹೊಂದಿದೆ. ಕುಷ್ಠರೋಗ ನಿವಾರಣಾಕೇಂದ್ರ, ಅಂಗವಿಕಲರ ಅಭಿವೃದ್ಧಿ ಕೇಂದ್ರ, ಅನಾಥ ಶರಣಾಲಯ, ಕೇಂದ್ರ ಆಸ್ಪತ್ರೆ ಮೊದಲಾದವನ್ನು ತಿ.ತಿ.ದೇ. ಯಶಸ್ವಿಯಾಗಿ ನಿರ್ವಹಿಸುತ್ತಿದೆ. ಜನಕ್ಕೆ ವಿಶೇಷ ಆಧುನಿಕ ವೈದ್ಯಕೀಯ ಸೇವೆ ಸಲ್ಲಿಸಲು ಸ್ವಾಮಿಯ ಆಶೀರ್ವಾದದ ಬೆಂಬಲದಿಂದ ಶ್ರೀ ವೆಂಕಟೇಶ್ವರ ವೈದ್ಯಕೀಯ ಸಂಸ್ಥೆ (ಸ್ವಿಮ್ಸ್)ಯನ್ನು -- ದೆಹಲಿ, ಅಜ್ಮೀರ, ಪಾಂಡಿಚೇರಿ, ಚಂಡೀಘರ್‌ಗಳ ಆಲಿಂಡಿಯಾ ಇನ್‌ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್, ಮಾದರಿಯಲ್ಲಿ ಆರಂಭಿಸಲಾಗಿದೆ. ಶ್ರೀ ವೆಂಕಟೇಶ್ವರ ವೈದ್ಯವಿಜ್ಞಾನ ಸಂಸ್ಥೆಯ ಮೂಲ ಉದ್ದೇಶ -- ಮನುಷ್ಯನ ಸರ್ವಾಂಗೀಣ ಆರೋಗ್ಯಸಾಧನೆ -- ಇಲ್ಲಿ ವೈದ್ಯಸೇವೆ, ವೈದ್ಯವಿಜ್ಞಾನದ ಶಿಕ್ಷಣ -- ತರಬೇತಿಗಳೊಡನೆ ಸಂಶೋಧನೆ ಅಭಿವೃದ್ಧಿಯನ್ನೂ ನಡೆಸಲಾಗುವುದು.

ಇಂತಹ ವೈದ್ಯವಿಜ್ಞಾನದ ಬಾಗಿಲು ನಮ್ಮಲ್ಲಿನ ಎಲ್ಲರಿಗೂ ತೆರೆದಿರಬೇಕು. ಅದನ್ನು ಸಾಧಿಸಲೆಂದೇ ಶ್ರೀ ಬಾಲಾಜಿ ಆರೋಗ್ಯವರ ಪ್ರಸಾದಿನಿ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗಿದೆ. ವಿಶೇಷ ತಜ್ಞ ವೈದ್ಯಕೀಯ ಸೇವೆಯು ಎಲ್ಲರಿಗೂ ಸುಲಭವಾಗಿ ದೊರೆಯುವಂತೆ ಮಾಡಲು ದಾನಿಗಳಿಂದಲೂ ಸಾರ್ವಜನಿಕರಿಂದಲೂ ಉದಾರವಾದ ದೇಣಿಗೆಗಳನ್ನು ನಿರೀಕ್ಷಿಸಲಾಗಿದೆ.

ಯೋಜನೆಯ ಸಾರಾಂಶ ಹೀಗಿದೆ :---

* ದಾನಿಗಳು ರೂ 1000-- ಅಥವಾ ಗುಣಕಗಳಲ್ಲಿ ದಾನ ನೀಡಬಹುದು. ಅದಕ್ಕೆ ಸಮನಾದ ಧನವನ್ನು ತಿ.ತಿ.ದೇ. ಸೇರಿಸಿ ಮೊತ್ತದ ಹಣವನ್ನು ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಠೇವಣಿಯಿರಿಸಿ ಅದರ ಬಡ್ಡಿಯನ್ನು ಬಡವರ, ವೈದ್ಯಕೀಯ ಚಿಕಿತ್ಸೆಗಾಗಿ ಬಳಸಲಾಗುವುದು.
* ಹತ್ತು ಲಕ್ಷ ಹಾಗೂ ಹೆಚ್ಚಿನ ಧನವನ್ನು ನೀಡುವವರ ಹೆಸರಿನಲ್ಲಿ ಒಂದು ಸಂಶೋಧನ ಪೀಠವನ್ನು ಸ್ಥಾಪಿಸಲಾಗುವುದು.
* ದಾನವನ್ನು ವ್ಯಕ್ತಿ / ಕುಟುಂಬ / ಕಂಪನಿ / ಯಾರಾದರೂ ಮಾಡಬಹುದು.
* ಐದು ಲಕ್ಷ ರೂಗಳಿಗಿಂತ ಹೆಚ್ಚಿಗೆ ದಾನ ನೀಡುವವರ ಹೆಸರನ್ನು ಸಂಸ್ಥೆಯ ಸ್ವಾಗತಕಚೇರಿಯಲ್ಲಿ ಬರೆದು ಪ್ರದರ್ಶಿಸಲಾಗುವುದು.
* ಪ್ರಯೋಜನ ಪಡೆದು ಆರೋಗ್ಯಹೊಂದಿದವರ ಡಿಸ್ಚಾರ್ಜ್ ಚೀಟಿಯಲ್ಲಿ ದಾನಿಗಳ ಹೆಸರನ್ನು ನಮೂದು ಮಾಡಲಾಗುವುದು.

## ದಾನಿಗಳಿಗೆ ನೀಡಲಾಗುವ ಸೌಕರ್ಯಗಳು :

* ಶ್ರೀ ಬಾಲಾಜೀ ಆರೋಗ್ಯ ವರಪ್ರಸಾದಿನಿ ಯೋಜನೆಗೆ ನೀಡಲಾದ ದಾನ 80 ಜಿ. ಕಲಮಿನನ್ವಯ ಆದಾಯಕರ ಮುಕ್ತ.
* ಆಸ್ಪತ್ರೆಯಲ್ಲಿ ದಾನಿಗಳ ಕುಟುಂಬಕ್ಕೆ ಬಾಡಿಗೆ ಕೋಣೆ ಹವಾನಿಯಂತ್ರಿತ ಕೋಣೆಗಳನ್ನು ನೀಡಲಾಗುವುದು
* 5 ಲಕ್ಷ ಮತ್ತು ಹೆಚ್ಚಿನ ಹಣದ ದಾನಿಗಳ ಹೆಸರಿನಲ್ಲಿ ಬಾಡಿಗೆ ಕೋಣೆಗಳನ್ನೂ ನಿರ್ಮಿಸಲಾಗುವುದು.
* 5 ಲಕ್ಷ ಹಾಗೂ ಹೆಚ್ಚಿನ ಹಣದ ದಾನದಿಂದ ದಾನಿಗಳು ಪ್ರತಿವರ್ಷ ಒಂದು ಚಿಕಿತ್ಸೆಯನ್ನು ಪ್ರಾಯೋಜಿತಗೊಳಿಸಬಹುದು.
* ದಾನಿಗಳು ಒಳರೋಗಿಗಳ, ಹೊರರೋಗಿಗಳ, ಆಹಾರಕ್ಕಾಗಿಯೂ ನೀಡಬಹುದು. ಸಂಸ್ಥೆಯಲ್ಲಿನ ವಾರ್ಷಿಕ ಸಾರಿಗೆ ವೆಚ್ಚಗಳಿಗೂ ನೀಡಬಹುದು.

  ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ -- ಇವರ ಹೆಸರಿನಲ್ಲಿ ಪಡೆದ ಡಿ. ಡಿ. ಯನ್ನು -- ನಿರ್ದೇಶಕರು ಶ್ರೀ ವೆಂಕಟೇಶ್ವರ ಇನ್‌ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್ -- ಇವರಿಗೆ ಕಳುಹಿಸುತ್ತ ಜೊತೆಗೇ ಕೆಳಕಂಡ ವಿವರಗಳನ್ನೂ ಎಲ್ಲ ದಾನಿಗಳೂ ನೀಡಬೇಕು.
* ಒಂದು ಲಕ್ಷ ಅಥವಾ ಅದಕ್ಕಿಂತ ಹೆಚ್ಚಿನ ಹಣ ದಾನಮಾಡುವವರ ಹೆಸರು ವಿಳಾಸಗಳೊಡನೆ ಅವರ ಮನೆಯ ಎಲ್ಲ ಸದಸ್ಯರ ಪಾಸ್‌ಪೋರ್ಟ್ ಸೈಜಿನ ಈಚಿನ ಭಾವಚಿತ್ರ ಇರಬೇಕು.
* ಆದಾಯತೆರಿಗೆ ವಿನಾಯತಿಯ ಪ್ರಮಾಣ ಪತ್ರವನ್ನು ಯಾರ ಹೆಸರಿಗೆ ನೀಡಬೇಕು ಎಂಬುದು.
* ದಾನಿಗಳು ಇತರತ್ರ ಯಂತ್ರ ಉಪಕರಣಗಳನ್ನು ನೀಡಲೂ ಅವಕಾಶವಿದೆ, ಅಥವಾ ವಾಹನಗಳನ್ನೂ ನೀಡಬಹುದಾಗಿದೆ. ಗ್ರಾಮೀಣ ಪ್ರಾಂತ್ಯಗಳಲ್ಲಿ ತಿ. ತಿ. ದೇವಸ್ಥಾನಗಳ ಆರೋಗ್ಯವಿಸ್ತರಣಾ ಶಿಬಿರಗಳನ್ನೂ ಪ್ರಾಯೋಜಿತಗೊಳಿಸಬಹುದು.

ಮಿಕ್ಕ ವಿಷಯಗಳನ್ನು ತಿಳಿಯಲು ಬರೆಯಬೇಕಾದ ವಿಳಾಸ--

**ಕಾರ್ಯನಿರ್ವಹಣಾಧಿಕಾರಿ,**
ತಿರುಮಲೆ, ತಿರುಪತಿ, ದೇವಸ್ಥಾನಗಳು -- ತಿರುಪತಿ.

ಅಥವಾ

**ನಿರ್ದೇಶಕರು,**
ಶ್ರೀ ವೆಂಕಟೇಶ್ವರ ಇನ್ಸಿಟಿಟ್ಯೂಟ್ ಆಫ್
ಮೆಡಿಕಲ್ ಸೈನ್ಸಸ್, ತಿರುಪತಿ.

# ವೇಗಾಸೇತು ಸ್ತೋತ್ರ

ಕೆ. ಎಸ್. ಶ್ರೀವತ್ಸ

ಶ್ರೀ ನಿಗಮಾಂತ ಮಹಾದೇಶಿಕರ ಅನೇಕ ದಿವ್ಯ ಸ್ತೋತ್ರಗಳಲ್ಲಿ ಶ್ರೀ ವೇಗಾಸೇತು ಸ್ತೋತ್ರವೂ ಒಂದು. ಇದನ್ನು ಕಾಂಚೀಪುರದಲ್ಲಿ ವಿರಾಜಮಾನನಾಗಿರುವ, "ಯಥೋಕ್ತಕಾರಿ" ಎಂಬ ಪ್ರಸಿದ್ಧ ಹೆಸರಿನಿಂದ ಕರೆಯಲ್ಪಡುವ ವೇಗಾಸೇತು ಅರ್ಚಾಮೂರ್ತಿಯನ್ನು ಕುರಿತು ರಚಿಸಿದ್ದಾರೆ. ಈ ಕ್ಷೇತ್ರದ ಬಗ್ಗೆ ಬ್ರಹ್ಮಾಂಡ ಪುರಾಣದಲ್ಲೂ ಉಲ್ಲೇಖವಿದೆ. ಚತುರ್ಮುಖ ಬ್ರಹ್ಮನು ಕಾಂಚೀಪುರದಲ್ಲಿ ಪರಮಾತ್ಮನನ್ನು ಸಾಕ್ಷಾತ್ಕರಿಸಲು ಒಂದು ಯಜ್ಞವನ್ನು ಆರಂಭಿಸಿದ. ಆ ಯಜ್ಞಕ್ಕೆ ಬರುವಂತೆ ಸರಸ್ವತಿಯನ್ನು ಆಹ್ವಾನಿಸಲಾಗಿ, ಸರಸ್ವತಿಯು ಬರಲು ನಿರಾಕರಿಸಿದರು. ಆದಾಗ್ಯೂ ಬ್ರಹ್ಮನು ಯಜ್ಞವನ್ನು ಪ್ರಾರಂಭಿಸಿಯೇ ಬಿಟ್ಟ. ಇದರಿಂದ ಕುಪಿತರಾದ ಸರಸ್ವತಿ, ಸಾವಿತ್ರಿ, ಗಾಯತ್ರಿ ದೇವತೆಗಳು ಒಂದು ವೇಗವಾದ ನದೀ ರೂಪದಲ್ಲಿ ಯಜ್ಞವನ್ನು ಹಾಳು ಮಾಡಲು ಬಂದರು. ಬ್ರಹ್ಮದೇವ ಪರಮಾತ್ಮನ ಮೊರೆಹೊಕ್ಕ. ಶರಣಾಗತ ರಕ್ಷಕನಾದ ಪರಮಾತ್ಮ ನದಿಗೆ ಅಡ್ಡಲಾಗಿ ಸೇತುವೆಯಂತೆ ಮಲಗಿ, ಯಜ್ಞ ಸಮಾಪ್ತಿಗೆ ಅನುವು ಮಾಡಿಕೊಟ್ಟನು. "ವೇಗ"ನದಿಗೆ ಅಡ್ಡಲಾಗಿ ಸೇತುವೆಯಂತೆ ಮಲಗಿದ ಜಗದ್ರಕ್ಷಕನಿಗೆ "ವೇಗಾಸೇತು" ಎಂಬ ಹೆಸರೇ ನಿಂತಿತು. ಇಂತಹ ಅರ್ಚಾಮೂರ್ತಿಯನ್ನು ಆಚಾರ್ಯರು ೧೦ ಪದ್ಯಗಳಲ್ಲಿ ಸ್ತುತಿಸಿದ್ದಾರೆ.

ಏಕಂ ವೇಗವತೀ ಮಧ್ಯೇ
ಹಸ್ತಿಶೈಲೇ ಚ ದೃಶ್ಯತೇ
ಉಪಾಯ ಫಲ ಭಾವೇನ
ಸ್ವಯಂ ವ್ಯಕ್ತಂ ಪರಂ ಮಹಃ

ಒಂದೇ ಪರತತ್ವವು, ವೇಗವತಿ ನದಿಯ ಮಧ್ಯದಲ್ಲಿ ಸ್ವಯಂ ವ್ಯಕ್ತವಾಗಿಯೂ, ಹಾಗೂ ಹಸ್ತಿ ಶೈಲದ ಗಿರಿಯ ಮೇಲೂ, ಸಾಧಕನಿಗೆ ಪರಮಾತ್ಮನನ್ನು ಹೊಂದಲು ಸಾಧನ ಮತ್ತು ಫಲದಂತೆ ಕಾಣಿಸಿಕೊಂಡಿದ್ದಾನೆ.

ವೇದಾಂತ ದೇಶಿಕರ ಹಸ್ತಿಗಿರಿ ಮಹಾತ್ಮೆಯಲ್ಲಿಯೂ ಈ ಶ್ಲೋಕ ಬಂದಿದೆ. ಬ್ರಹ್ಮ ಮಾಡಿದ ಯಜ್ಞದ ಅಂಗವಾಗಿ, ಪರಮಾತ್ಮ ಎರಡು ರೂಪದಲ್ಲಿ ಏಕಕಾಲದಲ್ಲಿ ಕಾಂಚೀಪುರದಲ್ಲಿ ಕಾಣಿಸಿಕೊಂಡ. ಒಂದು ಬ್ರಹ್ಮನ ಯಜ್ಞವನ್ನು ಕಾಪಾಡಲು ವೇಗಾಸೇತು ರೂಪದಿಂದ, ಮತ್ತೊಂದು ಯಜ್ಞದ ಫಲವಾಗಿ ವರದರಾಜ ರೂಪಿಯಾಗಿ, ಹಸ್ತಿಶೈಲದ ಮೇಲೆ. ಹೀಗೆ ಏಕಕಾಲದಲ್ಲಿ ಎರಡು ರೂಪದಲ್ಲಿ ಅವತರಿಸುವುದು ಸರ್ವಶಕ್ತನಾದ ಪರಮಾತ್ಮನಿಗೇನೇ ಸಾಧ್ಯ. ಸಾಧಕನಿಗೆ ಪರಮಾತ್ಮನೇ ಉಪಾಯ ಹಾಗೂ ಉಪೇಯ ಎಂಬುದನ್ನು ನಿರೂಪಿಸಿದ್ದಾರೆ. ಪರಂ ಮಹಃ ಎಂಬುದು ಭಗವಂತನ ಉತ್ಕೃಷ್ಟತೆಯನ್ನು ತೋರಿಸುತ್ತದೆ - ಪರಂ ಜ್ಯೋತಿ ಎಂಬಂತೆ.

ಇಷ್ಟೇ ಗಮಯಿತುಂ ಪಾರಂ
ಏಷ ಸೇತು ರಭಂಗುರಃ
ಯತ್ರ ಸಾರಸ್ವತಂ ಸ್ರೋತೋ
ವಿಶ್ರಾಮ್ಯತಿ ವಿಶ್ರುಂಖಲಂ

ಸರಸ್ವತಿ ನದಿಯ ಸಾಧಾರಣವಾದ ಗತಿಯನ್ನು ತಡೆದ ಸೇತುವು (ಪರಮಾತ್ಮನು) ನಮ್ಮನ್ನು ಸಂಸಾರವೆಂಬ ಮಹಾ ನದಿಯ ಆಚೆ ದಡಕ್ಕೆ ಕೊಂಡೊಯ್ಯಲು ಅರ್ಹವಾಗಿದೆ.

ಹಿಂದಿನ ಶ್ಲೋಕದಲ್ಲಿ ತಿಳಿಸಿದಂತೆ ವೇಗಾಸೇತುವು ಸಂಸಾರ ಸಾಗರವನ್ನು ದಾಟಲು ಉಪಾಯವಾಗಿರುವ ಸೇತುವೆಂದು ಈ ಶ್ಲೋಕದಲ್ಲೂ ಹೇಳಿದ್ದಾರೆ. ಈ ಸೇತುವು ಅನಾದಿ ಕಾಲದಿಂದಲೂ ಇರುವ ಸೇತುವೆ ಸರಸ್ವತಿ ನದಿಗೆ ಅಡ್ಡಲಾಗಿ ಮಲಗಿದ ಪರಮಾತ್ಮನನ್ನು ಒಂದು ಸೇತುವೆಯ ರೂಪದಲ್ಲಿ ಬಣ್ಣಿಸಿದ್ದಾರೆ.

ಸಾರಸ್ವತ ಸ್ರೋತಃ ಎಂಬುದು ಕೇವಲ ಸರಸ್ವತಿ ನದಿಯನ್ನಷ್ಟೇ ಅಲ್ಲ, ವಾಕ್ ಸರಸ್ವತಿಗೂ ಅನ್ವಯಿಸುತ್ತದೆ. ಉಪನಿಷತ್ತಿನಲ್ಲಿ "ಯತೋ ವಾಚೋ ನಿವರ್ತಂತೆ ಅಪ್ರಾಪ್ಯ ಮನಸಾಃ ಸಹ" ಎಂಬುದಾಗಿ ಹೇಳಿದೆ. ಪರಮಾತ್ಮನನ್ನು ವರ್ಣಿಸಲು ವಾಕ್ಕಿಗೂ (ಸರಸ್ವತಿಗೂ) ಸಾಧ್ಯವಿಲ್ಲ ಎಂದು ಭಾವಾರ್ಥ.

ಜಯತಿ ಜಗದೇಕ ಸೇತುಃ
ವೇಗವತೀ ಮಧ್ಯಲಕ್ಷಿತೋ ದೇವಃ
ಪ್ರಶಮಯತಿ ಯಃ ಪ್ರಜಾನಾಂ
ಪ್ರತಿರ್ದಾ ಸಂಸಾರ ಜಲಧಿ ಕಲ್ಲೋಲಾನ್

ಅಖಿಲಾಂಡ ಕೋಟಿ ಬ್ರಹ್ಮಾಂಡಕ್ಕೆಲ್ಲಾ ಪರಮಾತ್ಮ ಒಬ್ಬನೇ ಸೇತುವು. ಆ ಸೇತುವಾದ ಭಗವಂತನೇ ವೇಗವತೀ ನದಿಗೆ ಅಡ್ಡಲಾಗಿ ಮಲಗಿದ್ದಾನೆ. ಅವನಿಗೆ ಜಯವಾಗಲಿ. ಸಂಸಾರ ಸಮುದ್ರದ ತೀವ್ರವಾದ ಅಲೆಗಳಿಂದ ನಮ್ಮನ್ನು ಪಾರುಮಾಡಲು ಅವನೊಬ್ಬನೇ ಸಮರ್ಥ.



## ಸಪ್ತಗಿರಿ

## ಬರಹಗಾರರಿಗೆ ಸೂಚನೆ

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಅಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟನೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

೧) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

೨) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

೩) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

೪) ಕೇವಲ ಫೋಟೋಗಳನ್ನು ಮಾತ್ರ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

೫) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ರ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

೬) ಗೃಹಲಕ್ಷ್ಮಿ ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

೭) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

**ಸಂಪಾದಕರು**

ಸಪ್ತಗಿರಿ

ತಿ. ತಿ. ದೇವಸ್ಥಾನ, ತಿರುಪತಿ--೫೧೭ ೫೦೭

ಚಿತ್ತೂರು ಜಿಲ್ಲೆ, ಆಂ.

ಜಯತಿ ಎಂಬ ಶಬ್ದವು ಸಾಮಾನ್ಯವಾಗಿ ಎಲ್ಲಾ ಕವಿಗಳು ಪರಮಾತ್ಮನಿಗೆ ಮಂಗಳ ತೋರುವ ಶಬ್ದ. ಪೆರಿಯಾಳ್ವಾರು "ಪಲ್ಲಾಂಡು" ಎಂಬುದಾಗಿ ಹಾಡಿದರು. ಜಗತ್ತಿನ ಕಷ್ಟ ಕೋಟಲೆಗಳನ್ನೆಲ್ಲಾ ದಾಟಲು ಇರುವ ಸೇತುವೆಯೇ ಪರಮಾತ್ಮನ ಧ್ಯಾನ. ಪರಮಾತ್ಮನ ಧ್ಯಾನದಲ್ಲಿ ಮುಳುಗಿರುವವರಿಗೆ ಸಂಸಾರ ಸಮುದ್ರದ ತೀವ್ರವಾದ ಅಲೆಗಳ ಇರುವಿಕೆಯೇ ತೋರುವುದಿಲ್ಲ. ದಯಾಶತಕ ಸ್ತೋತ್ರದಲ್ಲಿಯೂ ಸಹ ಶ್ರೀರಾಮನನ್ನು ಸಂಸಾರ ಸಮುದ್ರದ ಸೇತುವೆಯನ್ನಾಗಿ ವರ್ಣಿಸಿದ್ದಾರೆ.

ವಿಭಾತು ಮೆ ಚೇತಸಿ ವಿಷ್ಣುಸೇತು
ವೇಗಾಪಗಾ ವೇಗ ವಿಘಾತ ಹೇತು:
ಅಂಭೋಜ ಯೋನಿರ್ ಯದುಪಜ್ಞ ಮಾಸೀತ್
ಅಂಭಂ ರಕ್ಷಾ ಹಯಮೇಧ ದೀಕ್ಷಾ

ವೇಗವತಿ ನದಿಯ ರಭಸವಾದ ಪ್ರವಾಹಕ್ಕೆ ಅಡ್ಡಿಯುಂಟುಮಾಡಿದ ಸೇತುವಾದ ವಿಷ್ಣುವು ಯಾವಾಗಲೂ ನನ್ನ ಮನಸ್ಸಿನಲ್ಲಿ ಇರಲಿ. ಬ್ರಹ್ಮನು ಪರಮಾತ್ಮನ ದರ್ಶನ ಮಾತ್ರದಿಂದಲೇ ತನ್ನ ಅಶ್ವಮೇಧ ಯಜ್ಞವನ್ನು ಯಾವ ವಿಘ್ನವಿಲ್ಲದೆ ಪೂರೈಸಿದ.

ಈ ಶ್ಲೋಕದಲ್ಲಿ ಆಚಾರ್ಯರು, ಶ್ರೀ ವಿಷ್ಣುವನ್ನು ತಮ್ಮ ಮನಸ್ಸಿನಲ್ಲಿ ಯಾವಾಗಲೂ ಇರಬೇಕೆಂದು ಪ್ರಾರ್ಥಿಸುತ್ತಾರೆ. ಎಲ್ಲ ಕಡೆಯಲ್ಲೂ ಇರುವವನಿಗೆ ವಿಷ್ಣು ಎಂದು ಹೆಸರು. ಹಾಗಿರಲು ನನ್ನ ಮನಸ್ಸಿನಲ್ಲಿ ಇರಬೇಡವೇ? ಎಂಬುದಾಗಿ ಪ್ರಶ್ನಿಸುತ್ತಿದ್ದಾರೆ. ಪರಮಾತ್ಮನು ನಮ್ಮ ಮನಸ್ಸಿನಲ್ಲಿ ಯಾವಾಗಲೂ ಇದ್ದದ್ದೇ ಆದಲ್ಲಿ, ನಮ್ಮ ಎಲ್ಲಾ ಧರ್ಮ ಕಾಮನೆಗಳೂ ಯಾವ ವಿಘ್ನವೂ ಇಲ್ಲದೇ ಪೂರೈಸಿ ಬಿಡುತ್ತವೆ. ಇದಕ್ಕೆ ಬ್ರಹ್ಮನ ಅಶ್ವಮೇಧ ಯಾಗದ ಪೂರೈಕೆಯೇ ಸಾಕ್ಷಿ.

ಚತುರಾನನ ಸಪ್ತ ತಂತು ಗೋಪ್ತಾ
ಸರಿತಂ ವೇಗವತಿ ಮಸೌ ನಿರುಂಧನ್
ಪರಿಪುಷ್ಯತಿ ಮಂಗಳಾನಿ ಪುಂ ಸಾಂ
ಭಗವಾದ್ ಭಕ್ತಿಮತಾಂ ಯಥೋಕ್ತಕಾರಿ

ವೇಗವತೀ ನದಿಯ ರಭಸವನ್ನು ತಡೆಹಿಡಿದ ಹಾಗೂ ಬ್ರಹ್ಮನ ಯಜ್ಞವನ್ನು ಕಾಪಾಡಿದ ಪ್ರಭುವು ಭಕ್ತರಿಗೆ ಕೊಟ್ಟ ಮಾತಿನಂತೆ ನಡೆಯುವವನಾಗಿ ಯಥೋಕ್ತಕಾರಿ ಎಂಬ ಹೆಸರನ್ನು ಹೊತ್ತು, ಎಲ್ಲರಿಗೂ ಆನಂದವನ್ನು ಉಂಟುಮಾಡುವವನಾಗಿದ್ದಾನೆ.

ಈ ಕ್ಷೇತ್ರದಲ್ಲಿ ವಿರಾಜಮಾನನಾಗಿರುವ ಅರ್ಚಾಮೂರ್ತಿಗೆ "ಯಥೋಕ್ತಕಾರಿ" ಎಂಬ ಪ್ರಸಿದ್ಧವಾದ ಹೆಸರುಂಟು. ಇದರ ಹಿನ್ನೆಲೆಯಲ್ಲಿ ಒಂದು ಸ್ವಾರಸ್ಯವಾದ ಪ್ರಸಂಗವಿದೆ. ತಿರುಮಳಿಶೈ ಆಳ್ವಾರ್ ಎಂಬ ಭಕ್ತೋತ್ತಮರಿಗೆ ಕಣಿಕಣ್ಣನ್ ಎಂಬ ಆಪ್ತ ಶಿಷ್ಯನಿದ್ದನು. ಅವನು ಆ ನಾಡಿನ ದೊರೆಯ ಅವಕೃಪೆಗೆ ಪಾತ್ರನಾಗಿ, ದೊರೆ ಅವನನ್ನು ಊರು ಬಿಟ್ಟು ಹೋಗೆಂದು ಆಜ್ಞಾಪಿಸಿದ. ಅದರಂತೆ ಕಣಿಕಣ್ಣನು ಹೊರಟ. ಆಳ್ವಾರು ಶಿಷ್ಯನ ವಿಯೋಗ ಸಹಿಸಲಾರದೇ ತಾವೂ ಹೊರಟರು. ಹೊರಡುವ ಮುನ್ನ, ವೇಗಾಸೇತು ಅರ್ಚಾಮೂರ್ತಿಯ ಬಳಿ ಹೋಗಿ "ಕಣಿಕಣ್ಣನು ಹೊರಡುತ್ತಿದ್ದಾನೆ. ನಿನ್ನ ಅಂತರಂಗ ಭಕ್ತನಾದ ನಾನೂ ಹೋಗುತ್ತಿದ್ದೇನೆ. ನೀನೂ ಹೊರಡು, ಆದಿ ಶೇಷನನ್ನು ಚಾಪೆಯಾಗಿ ಸುತ್ತಿಕೊಂಡು ಹೊರಡು" ಎಂದು ಆಜ್ಞಾಪಿಸಿದನು. ಅದರಂತೆ ಪರಮಾತ್ಮನು ತಾನು ಮಲಗಿದ್ದ ಆದಿ ಶೇಷನನ್ನು ಚಾಪೆಯ ರೂಪದಲ್ಲಿ ಸುತ್ತಿ, ಆಳ್ವಾರನ್ನು ಹಿಂಬಾಲಿಸಿದ. ವಿಷಯ ತಿಳಿದ ರಾಜನು ಓಡಿ ಬಂದು ಆಚಾರ್ಯರ ಕ್ಷಮೆ ಕೋರಿ ವಾಪಸು ಕಾಂಚೀಪುರಕ್ಕೆ ಬರುವಂತೆ ಪ್ರಾರ್ಥಿಸಿಕೊಂಡ. ಆಳ್ವಾರರು ಪ್ರಸನ್ನರಾಗಿ ಪುನಃ ನಗರಕ್ಕೆ ಹಿಂತಿರುಗಿದರು. ಪರಮಾತ್ಮನೂ ಯಥಾಸ್ಥಾನ ಸೇರಿದ. ಆದರೆ ಈ ಬಾರಿ ಮೊದಲು ಮಲಗಿದ್ದ ವಿರುದ್ಧ ದಿಕ್ಕಿನಲ್ಲಿ ಮಲಗಿದ. ಹಿಂದೆ ಬಲಗೈಯನ್ನು ದಿಂಬಾಗಿಇಟ್ಟುಕೊಂಡಿದ್ದ ಭಗವಂತನು ಈಗ ಎಡಗೈಯನ್ನು ದಿಂಬಾಗಿ ಇಟ್ಟುಕೊಂಡು ಮಲಗಿದನು. ಶ್ರೀ ರಂಗನಾಥನು ಶಯನಿಸಿರುವ ಎಲ್ಲಾ ಕ್ಷೇತ್ರಗಳಲ್ಲೂ ಬಲಗೈಯನ್ನೇ ದಿಂಬಾಗಿ ಇಟ್ಟುಕೊಂಡಿದ್ದಾನೆ. ಈ ಕ್ಷೇತ್ರದಲ್ಲಿ ಮಾತ್ರ ಎಡಗೈಯನ್ನು ತಲೆದಿಂಬಾಗಿ ಇಟ್ಟುಕೊಂಡಿದ್ದಾನೆ. ಇದು ಅವನ ಭಕ್ತ ಪರಾಧೀನತೆಗೆ ಸಾಕ್ಷಿ. ಭಕ್ತರ ಮಾತಿನಂತೆ ನಡೆದವನಾದ್ದರಿಂದ "ಯಥೋಕ್ತಕಾರಿ" ಎಂಬ ಹೆಸರು ಪ್ರಸಿದ್ಧವಾಯಿತು. ಇಂತಹ ಪರಮ ಪುರುಷನು ಎಲ್ಲಾ ಭಕ್ತರ, ಪಂಡಿತರ ಪಾಮರರ ಅಭೀಷ್ಟಗಳನ್ನು ನೆರವೇರಿಸಿ ಆನಂದವನ್ನು ಉಂಟುಮಾಡುತ್ತಾನೆ ಎಂದು ಕೊಂಡಾಡಿದ್ದಾರೆ ಆಚಾರ್ಯರು.

ಶ್ರೀಮರ್ಾಪಿತಾಮಹವಧೂಪರಿಚರ್ಯಮಾಣಃ
ಶೇತೆ ಭುಜಂಗ ಶಯನೇ ಸ ಮಹಾ ಭುಜಂಗಃ
ಪ್ರತ್ಯಾದಿಶಂತಿ ಭವ ಸಂ ಚರಣಂ ಪ್ರಜಾನಾಂ
ಭಕ್ತಾನುಗಂತುರಿಹ ಯಸ್ಯ ಗತಾಗತಾನಿ

ಲಕ್ಷ್ಮೀಪತಿಯಾದ ವೇಗಾಸೇತುವು ಬ್ರಹ್ಮನ ವಧುವಾದ ಸರಸ್ವತಿಯಿಂದ ಸೇವೆ ಪಡೆಯುತ್ತಿದ್ದಾನೆ. ಸರ್ಪಶಯನನಾಗಿರುವ ಅವನೇ ಒಂದು ಮಹಾ ಸರ್ಪದಂತಿದ್ದಾನೆ. ಭಕ್ತ ಪರಾಧೀನನಾದ ಇವನನ್ನು, ಆಶ್ರಯಿಸುವವರು, ಸಂಸಾರಕ್ಕೆ ಪದೇ ಪದೇ ಬರಬೇಕಾದ ಪ್ರಸಂಗ ಒದಗುವುದಿಲ್ಲ.

ಶ್ರೀ ವೇಗಾಸೇತು ಮೂರ್ತಿಯು, ಕಾಂಚೀಪುರ ದಿಂದ ಹೊರಕ್ಕೆ ಹೋಗಿ ಮತ್ತೆ ವಾಪಸ್ ಬಂದ ಪ್ರಸಂಗವನ್ನು ಮತ್ತೆ ಮತ್ತೆ ನೆನೆದರೆ ಅಂತಹ ಭಕ್ತರು ಈ ಸಂಸಾರಕ್ಕೆ ಪದೇ ಪದೇ ಬರುವುದು ತಪ್ಪಿ ಶಾಶ್ವತವಾದ ಮೋಕ್ಷ ಸಾಮ್ರಾಜ್ಯವನ್ನು ಪಡೆಯು ತ್ತಾರೆ. ಭುಜಂಗ ಶಯನನಾದ ಪರಮಾತ್ಮನನ್ನೆ ಒಂದು "ಮಹಾ ಭುಜಂಗ" ಎಂದು ಕರೆದಿರುವುದು ಉತ್ತಮ ಶ್ಲೇಷೆ.

ಪ್ರಶಮಿತ ಹಯ ಮೇಧಾ
ವ್ಯಾಪದಂ ಪದ್ಮಯೋನೇಃ
ಶ್ರಿತ ಜನ ಪರ ತಂತ್ರಂ ಶೇಷ ಭೋಗೆ ಶಯಾನಂ
ಶರಣ ಮುಪಗತಾಃ ಸ್ಮ
ಶಾಂತಿ ನಿಶ್ಶೇಷ ದೋಷಂ
ಶತಮಖ ಮಣಿ ಸೇತುಂ ಶಾಶ್ವತಂ ವೇಗವತ್ಯಾಃ

ಯಾವ ಸರ್ವೇಶ್ವರನು ಬ್ರಹ್ಮನ ಅಶ್ವಮೇಧ ಯಾಗಕ್ಕೆ ಒದಗಿದ ವಿಘ್ನಗಳನ್ನು ನಿವಾರಿಸಿದನೋ, ತನ್ನನ್ನು ಆಶ್ರಯಿಸಿದವರಿಗೆ ಅಧೀನನೋ, ಯಾರು ಶೇಷಶಾಯಿಯೋ, ಯಾರು ಹೇಯ ಗುಣ ರಹಿತನೋ, ಅವನು ವೇಗವತಿ ನದಿಗೆ ಶಾಶ್ವತ ಮಣಿ ರತ್ನದಂತೆ ಸೇತುವೆಯಾಗಿದ್ದಾನೆ, ಅಂತಹ ದಿವ್ಯ ಮೂರ್ತಿಯಲ್ಲಿ ನಾವು ಶರಣು ಹೊಂದುತ್ತೇವೆ.

ಈ ಶ್ಲೋಕದಲ್ಲಿ ಆಚಾರ್ಯರು ಪ್ರಪತ್ತಿಯನ್ನು ಆಚರಿಸಿದ್ದಾರೆ. ನಾವು ಎಂಬ ಬಹುವಚನ ದಿಂದ ಆಚಾರ್ಯರ ಅನುಯಾಯಿಗಳೆಲ್ಲರೂ ಸೇರಿದ್ದಾರೆ. "ಶರಣಮುಪಗತಾಸ್ಮ" ಎಂಬುದರಿಂದ ಇದು ವ್ಯಕ್ತ. ಪರಮಾತ್ಮನಿಗೆ ಐದು ವಿಶೇಷಣಗಳನ್ನು ಹೇಳಿದ್ದಾರೆ. ಮೊದಲನೆಯದಾಗಿ ಆಶ್ರಿತರ ಸಾಧನೆಯ ದಾರಿಯಲ್ಲಿ ಬರುವ ವಿಘ್ನಗಳನ್ನು ನಿವಾರಿಸುವುದು. ಎರಡನೆಯದು ತನ್ನನ್ನು ತಾನೇ ಆಶ್ರಿತರಿಗೆ ಸಮರ್ಪಿಸಿಕೊಳ್ಳುವುದು (ಭಕ್ತ ಪರಾಧೀನತೆ) ಶೇಷ ಶಾಯಿಯಾಗಿ ತನ್ನ ಪರತ್ವ ಪ್ರಕಟನೆ ಮೂರನೆಯ ವಿಶೇಷಣ. ನಾಲ್ಕನೆಯದು ಆಚಾರ್ಯ ಶ್ರೀರಾಮಾನುಜರು, ಪರಮಾತ್ಮನ ಕಲ್ಯಾಣಗುಣಾಕರತ್ವ ಹಾಗೂ ಹೇಯಗುಣ ರಹಿತತ್ವವನ್ನು ಬಹಳ ನಿಪುಣತರವಾಗಿ ಉಪಪಾದಿಸಿದ್ದಾರೆ. ಕೊನೆಯದಾಗಿ ಪರಮಾತ್ಮನು ತಾನೇ ಸಿದ್ಧೋಪಾಯ ಮತ್ತು ಸಾಧ್ಯೋಪಾಯ; ಜೀವಾತ್ಮರುಗಳು ಹೊಂದದೇಕಾದ ವಸ್ತುವು ಅವನೇ, ಅವನನ್ನು ಹೊಂದಲು ದಾರಿಯೂ ಅವನೇ. ಬಹಳ ಸುಂದರವಾದ ಅರ್ಥ ಗರ್ಭಿತ ಶ್ಲೋಕ.

ಶರಣ ಮುಪಗತಾನಾಂ
ಸೋಯಂ ಆದೇಶಕಾರಿ
ಶಮಯತಿ ಪರತಾಪಂ
ಸಂಮುಖಃ ಸರ್ವಜಂತೋಃ
ಶತಗುಣ ಪರಿಣಾಮಃ ಸನ್ನಿಧೌ ಯಸ್ಯನಿತ್ಯಂ
ವರವಿತರಣ ಭೂಮಾ ವಾರಣಾದ್ರೀಶ್ವರಸ್ಯ

ಈ ವೇಗಾಸೇತು ಮೂರ್ತಿಯು, ತನ್ನ ಭಕ್ತರ ಅಭಿಲಾಷೆಯಂತೆ ನಡೆಯುವವನು. ತನ್ನಿದಿರು ನಿಂತವರ ದುರಿತಗಳನ್ನೆಲ್ಲಾ ಹೋಗಲಾಡಿಸುವವನು. ಅಷ್ಟೇ ಅಲ್ಲ, ಈ ಮೂರ್ತಿಯ ಸನ್ನಿಧಿಯಲ್ಲಿ ವರದರಾಜನ ವರಪ್ರದತ್ವವು ನೂರ್ಮಡಿ ಹೆಚ್ಚಾಗುವುದು. ಈ ಶ್ಲೋಕದಲ್ಲಿ ಶರಣಾಗತಿಯ ಮಹಿಮೆಯನ್ನು ಹೇಳಲಾಗಿದೆ. ಪರಮಾತ್ಮನಲ್ಲಿ ಶರಣಾಗತಿ ಮಾಡಿದ ಉತ್ತರ ಕ್ಷಣದಿಂದ, ನಮ್ಮ ಧರ್ಮ ಕಾಮನೆಗಳನ್ನು ಪರಮಾತ್ಮನು ನೆರವೇರಿಸುತ್ತಾನೆ. ಅಷ್ಟೇಕೆ ಭಕ್ತರಿಗೆ ವಶನಾಗಿ ಅವರಿಗೆ ಪೂರ್ಣಾನಂದವನ್ನು ಉಂಟುಮಾಡುತ್ತಾನೆ. ರಘುವೀರ ಗದ್ಯದಲ್ಲಿ ಆಚಾರ್ಯರು "ತರಣೇಸುತ ಶರಣಾಗತಿ ಪರತಂತ್ರೀ ಕೃತ ಸ್ವಾತಂತ್ರ್ಯ" ಎಂದಿದ್ದಾರೆ. ತನ್ನ ಸ್ವಾತಂತ್ರ್ಯವನ್ನು ಭಕ್ತರಿಗೆ ಕೊಟ್ಟುಬಿಡುತ್ತಾನೆ. ಪರಮಾತ್ಮನೇ ತನ್ನ ಭಕ್ತರಿಂದ ಆದೇಶ ಪಡೆಯುತ್ತಾನೆ ಎಂದು ನ್ಯಾಸತಿಲಕ ದಲ್ಲಿ ಹೇಳಿದ್ದಾರೆ.

ಭಕ್ತರ ದುರಿತಗಳನ್ನೆಲ್ಲಾ ತಾನೇ ದರ್ಶನ ನೀಡಿ ಪರಿಹರಿಸುವುದು ಆ ಪರಮಾತ್ಮನ ಮತ್ತೊಂದು ವೈಶಿಷ್ಟ್ಯ. ಶರಣಾಗತರಿಗೆ ಆತನ ದರ್ಶನ ಸೌಭಾಗ್ಯಕ್ಕಿಂತ ಹೆಚ್ಚಿನದು ದೇರೊಂದಿಲ್ಲ. ದುರಿತಗಳ ಪರಿಹಾರಕ್ಕಿಂತ ಹೆಚ್ಚಿನ ಆನಂದವನ್ನು ಭಕ್ತನಾದವನು, ಸ್ವಾಮಿಯ ದರ್ಶನದಿಂದ ಪಡೆಯುತ್ತಾನೆ. ಶ್ರೀಕೃಷ್ಣನು ಯಾವಾಗಲೂ ತಮ್ಮ ಕಣ್ಣ ಮುಂದೆಯೇ ಇರಬೇಕೆಂದು ಗೋಪಿಯರು ಬಯಸಿದ್ದನ್ನು ಇಲ್ಲಿ ಸ್ಮರಿಸಬಹುದು. ಇಂತಹ ವೇಗಾಸೇತು ಮೂರ್ತಿಯು ಕಾಂಚೀಪುರದಲ್ಲಿ ಇರುವುದರಿಂದ, ಶ್ರೀ ವರದರಾಜನ ದಯೆಯು ಇನ್ನೂ ಹೆಚ್ಚಿ ಸಕಲ ವರಪ್ರದನಾಗಿ ಪ್ರಕಾಶಿಸುತ್ತಾನೆ ಎಂಬುದು ಭಾವಾರ್ಥ.

ಕಾಂಚೀ ಭಾಗ್ಯಂ ಕಮಲ ನಿಲಯಾ
ಚೇತಸೋ ಅಭೀಷ್ಟ ಸಿದ್ಧಿಃ
ಕಲ್ಯಾಣಾನಾಂ ನಿಧಿರವಿಕಲಃ
ಕೋಪಿ ಕಾರುಣ್ಯ ರಾಶಿಃ
ಪುಣ್ಯಾನಾಂ ನಃ ಪರಿಣತಿರಸೌ
ಭೂಷಯನ್ ಭೋಗಿಶಯ್ಯಾಂ
ವೇಗಾಸೇತು ರ್ಜಯತಿ
ವಿಪುಲೋ ವಿಶ್ವರಕ್ಷೈಕ ಹೇತುಃ

ಈ ವೇಗಾಸೇತು ಮಹಾಮಹಿಮನು ಕಾಂಚೀಪುರಕ್ಕೆ ಭಾಗ್ಯನೀಡುವವನು. ಲಕ್ಷ್ಮಿ ವಲ್ಲಭನಾದ ಈ ಮೂರ್ತಿಯು ಅಭೀಷ್ಟಪ್ರದನು. ಸಮಸ್ತ ಕಲ್ಯಾಣ ಗುಣ ಪರಿಪೂರ್ಣನು. ವರ್ಣಿಸಲು ಅಸಾಧ್ಯವಾದ ಕಾರುಣ್ಯ ಪರ್ವತವು. ಭಕ್ತರ ಪುಣ್ಯ ಕಾರ್ಯಗಳ ಫಲವೇ ವೇಗಾಸೇತು ಮೂರ್ತಿ ಸ್ವರೂಪವಾಗಿದೆ. ವಿಶ್ವ ರಕ್ಷಕನಾಗಿರುವ ಇಂತಹ ಆನಂದ ಮೂರ್ತಿಗೆ ಜಯವಾಗಲಿ.

ಹೆಚ್ಚು ಕಡಿಮೆ ಈ ಶ್ಲೋಕವು ಧ್ಯಾನ ಶ್ಲೋಕ ದಂತಿದೆ. ದೇಶಿಕರು ತಮ್ಮ ಅನೇಕ ಸ್ತೋತ್ರಗಳ ಕೊನೆಯಲ್ಲಿ ಧ್ಯಾನ ಶ್ಲೋಕಗಳನ್ನು ರಚಿಸಿರುವುದು ಕಂಡು ಬರುತ್ತದೆ. ಭಗವಂತನ ಪರತತ್ವ ಗುಣಗಳಾದ, ಲಕ್ಷ್ಮಿಪತಿತ್ವ, ಸರ್ವರಕ್ಷಕತ್ವ, ಕಾರುಣ್ಯ ಪರಿಪೂರ್ಣತ್ವ ಮುಂತಾದ ಗುಣಗಳನ್ನು ಸತತವಾಗಿ ಮನನ ಮಾಡಲು ಸಾಧ್ಯವಾಗುವಂತೆ ಈ ಶ್ಲೋಕ ರಚನೆಯಾಗಿದೆ. ವರದರಾಜ ಪಂಚಾಶತ್ ನ ಪ್ರಥಮ ಶ್ಲೋಕದಲ್ಲಿ "ಕಾರುಣ್ಯ ರಾಶಿಃ" ಎಂಬ ಪದ ಪ್ರಯೋಗಿಸಿದ್ದು, ಈ ಸ್ತೋತ್ರದ ಕೊನೆಯಲ್ಲಿ ಪ್ರಯೋಗಿಸಿರುವುದು, ಭಗವಂತನ ಗುಣಗಳ ಕೊಂಡಾಟವನ್ನು ವರದರಾಜ-ಪಂಚಾಶತ್‌ನಲ್ಲಿ ಪ್ರಾರಂಭಿಸಿ ವೇಗಾಸೇತು ಸ್ತೋತ್ರದಲ್ಲಿ ಮುಗಿಸಿರುವಂತೆ ತೋರುತ್ತದೆ. ಪ್ರತಿ ದಿನವೂ ಧ್ಯಾನ ಮಾಡಬೇಕಾದ ಶ್ಲೋಕ.

ವೇಗಾಸೇತುರಿದಂ ಸ್ತೋತ್ರಂ
ವೇಂಕಟೇಶೇನ ನಿರ್ಮಿತಂ
ಯೇ ಪಠಂತಿ ಜನಾಸ್ತೇಷಾಂ
ಯಥೋಕ್ತಂ ಕುರುತೇ ಹರಿಃ

ವೆಂಕಟೇಶನೆಂದು ಕರೆಯಲ್ಪಡುವ ವೇದಾಂತಾಚಾರ್ಯರಿಂದ ರಚಿಸಲ್ಪಟ್ಟ ಈ ವೇಗಾಸೇತು ಸ್ತೋತ್ರವನ್ನು ಯಾರು ಪಠಿಸುತ್ತಾರೋ ಅವರ ಎಲ್ಲಾ ಕಾಮನೆಗಳನ್ನು ಭಕ್ತರ ಇಚ್ಛೆಯಂತೆಯೇ ನಡೆಸುತ್ತಾನೆ.

ಫಲಶ್ರುತಿಯನ್ನು ಇಲ್ಲಿ ಹೇಳಿದೆ. ಈ ಸ್ತೋತ್ರದಲ್ಲಿ ಮುಖ್ಯವಾಗಿ ಹೇಳಿರುವ ಎರಡು ಅಂಶಗಳನ್ನು ಇಲ್ಲಿ ಪ್ರಸ್ತಾಪಿಸಿದ್ದಾರೆ. ಒಂದು ವೇಗಾಸೇತುವಾದ ಪರಮಾತ್ಮನ ಮಹಿಮೆ, ಎರಡು ಭಕ್ತನ ಮಾತಿನಂತೆ ನಡೆದುದ್ದು "ಯಥೋಕ್ತಕಾರಿ" ಆದದ್ದು. ಈ ಸ್ತೋತ್ರದಲ್ಲಿ ಅಂಶ ಸ್ಪಷ್ಟವಾಗುವುದೇನೆಂದರೆ, ಪರಮಾತ್ಮನು ತನ್ನ ಅಂತರಂಗ ಭಕ್ತರ ಇಷ್ಟಗಳನ್ನು ತನ್ನಿಚ್ಛೆಯಂತೆ ಪೂರೈಸುವುದಿಲ್ಲ. ಭಕ್ತರ ಮನಸ್ಸಿನಂತೆ ತಾನು ನಡೆದುಕೊಳ್ಳುತ್ತಾನೆ. ಅಂತಹ ಅಂತರಂಗ ಭಕ್ತರು ಬಹಳ ಶ್ರೇಷ್ಠರು ಹಾಗೂ ಅಪರೂಪ. ಆ ರೀತಿಯಾದ ಅಂತರಂಗ ಭಕ್ತಿಯನ್ನು ಸಂಪಾದಿಸಲು ಪ್ರಯತ್ನಿಸಬೇಕು.

ಶ್ರೀಮತೇ ವೇದಾಂತ ದೇಶಿಕಾಯ ನಮಃ

★★★★★★★★★

# ನವರಾತ್ರಿಯ ರೇಖಾಗಣಿತ

--ಸಾಲೀಮಠ ದೊಡ್ಡಯ್ಯಶಾಸ್ತ್ರಿ.

ನವರಾತ್ರಿ ಒಂಭತ್ತು ರಾತ್ರಿಗಳ ಹಬ್ಬವೂ ಹೌದು. ರಾತ್ರಿಯೆಂದರೆ ರಾತ್ರಿಮಾತ್ರವೆ ಅಲ್ಲ. ಹಗಲೂ ಹೌದು; ರಾತ್ರಿಯೂ ಹೌದು. ಸಪ್ತಾಹ ಎನ್ನುತ್ತೇವಲ್ಲ - ಹಾಗೆಯೇ ಇದೂ. ಅಹ ಎಂದರೆ ಹಗಲು. ಸಪ್ತಾಹ ಎಂದರೆ - ಏಳು ಹಗಲೂ ಹೌದು; ಏಳೂ ರಾತ್ರಿಯೂ ಹೌದು. ದಿನ - ದಿವಸ ಎಂದರೂ ಮೂಲಾರ್ಥ ಹಗಲು ಎಂದೇ. ಆದರೆ ಹಗಲೂ ರಾತ್ರಿ ಸೇರಿ ದಿನ ಎನ್ನುತ್ತೇವೆ; ದಿವಸ ಎನ್ನುತ್ತೇವೆ.

ಹೀಗೆ ದಿನ - ದಿವಸಗಳು ಅಹ ಮತ್ತು ರಾತ್ರಿಗಳು ೧೨ ಗಂಟೆಯಿಂದ ೨೪ ಗಂಟೆಗೆ ವಿಸ್ತಾರಗೊಂಡವು.

ನವರಾತ್ರಿಯೂ ಹಾಗೆಯೆ ಒಂಭತ್ತು ಹಗಲುಗಳು ಮತ್ತು ಒಂಭತ್ತು ರಾತ್ರಿಗಳು. ಹಗಲೂ ಹಬ್ಬ; ರಾತ್ರಿಯೂ ಹಬ್ಬ. ಆದರೂ ರಾತ್ರಿ ಎಂದೇ ಏಕೆ ಹೇಳಬೇಕು?

ದುರ್ಗೆಯ ನವರೂಪಗಳಿಗೆ ರಾತ್ರಿಯಲ್ಲಿ ವಿಶೇಷ ಪೂಜೆ ನಡೆಯುವುದರಿಂದ ದುರ್ಗಾಸಪ್ತಶತೀಪಾರಾಯಣದ ಜತೆಗೆ ನಡೆಯುವ ಪೂಜೆ ವಿಶೇಷವಾಗಿ ಮಂಡಲದನಡುವೆ ಕಾಲು ದೀಪವನ್ನಿಟ್ಟು ನಡೆಯುತ್ತದೆ. ದೀಪಾಲಂಕಾರದ ಪೂಜೆ ಕತ್ತಲಲ್ಲೆ ಚಂದ ಅಲ್ಲವೇ?

ಆದರಿಂದ ಇದು ರಾತ್ರಿಯ ಪೂಜೆ. ಇದು ರಾತ್ರಿಯ ಹಬ್ಬ. ಅದಕ್ಕೆಂದೇ ಇದು ನವರಾತ್ರಿಯ ಹಬ್ಬ. ಇನ್ನು ಪ್ರಾಚೀನ ಶಾಸ್ತ್ರಕಾರರು ಗಂಡು ಹೆಣ್ಣಿನ ಸಂಕೇತವಾಗಿ ಬಳಸುತ್ತಾರೆ.

ಹಗಲು ಗಂಡು; ರಾತ್ರಿ ಹೆಣ್ಣು. ಪುರುಷ ದೇವತೆಗಳ ಪೂಜೆ ಹಗಲಲ್ಲಿ, ಸ್ತ್ರೀ ದೇವತೆಗಳ ಪೂಜೆ ಇರುಳಲ್ಲಿ. ಮಹಿಷ ಮರ್ದಿನಿಯಾದ ದುರ್ಗೆ ಜಗದ ತಾಯಿಯಲ್ಲವೆ? ಅದಕ್ಕೆಂದೇ ಅವಳ ಪೂಜೆ ರಾತ್ರಿಯಲ್ಲಿ. ಅವಳ ಹಬ್ಬ ರಾತ್ರಿಯ ಹಬ್ಬ.

ಏಕೆ ಗಂಡು ಹಗಲು? ಏಕೆ ಹೆಣ್ಣು ಇರುಳು? ಗಂಡು ಹಗಲಿನಂತೆ ಬಟಾ ಬಯಲು! ಹೆಣ್ಣು ಇರುಳಿನಂತೆ ನಿಗೂಢ! ಹೀಗೆ ಚಿಂತಿಸಿರಬಹುದೆ ಪ್ರಾಚೀನರು? ಇದನ್ನು ಹೆಂಗಸರು ಒಪ್ಪುತ್ತಾರೋ ಇಲ್ಲವೋ ಗೊತ್ತಿಲ್ಲ.

ಹೀಗೆ ಹತ್ತಾರು ಕಲ್ಪನೆಗಳು ಕಲೆತ ನವದುರ್ಗೆಯ ಹಬ್ಬ ನವರಾತ್ರಿಯಾಯಿತು. ಅದೇ ಜೀವನಕ್ಕೆ ಹೊಸ ಉತ್ಸಾಹ ಭರವಸೆಗಳನ್ನು ತುಂಬುವ ಹೊಸರಾತ್ರಿಯೂ ಆಯಿತು. ನವರಾತ್ರಿಯ ಪೂಜೆಗೆ ರಂಗವಲ್ಲಿಯ ಮಂಡಲದ ಅಲಂಕಾರ. ಮಂಡಲಗಳಲ್ಲಿ ಪ್ರಸಿದ್ಧವಾದದ್ದು ಶ್ರೀಚಕ್ರ - ದುರ್ಗಾ ಪೂಜೆಯನ್ನು 'ಶ್ರೀಚಕ್ರ ಪೂಜೆ' ಎಂದೂ ಕರೆಯುತ್ತಾರೆ.

ಯಾವುದೇ ಮಂಡಲವಾದರೂ ಸರಿಯೆ ಅದು ತ್ರಿಕೋನ ಮತ್ತು ವೃತ್ತಗಳ ಸಮಾಗಮ.

ಯಜ್ಞಯಾಗಗಳೂ ಹೋಮ ಹವನಗಳೂ ಸೃಷ್ಟಿಯ ಸಂಕೇತವೇ. ಹೋಮಕುಂಡವೇ ಗರ್ಭಕೋಶ. ಕುಂಡದ ಮೇಲೆ ಬಿಡಿಸಿರುವ ಅಶ್ವತ್ಥದಲದ ಚಿಹ್ನೆಯೇ ಯೋನಿಕೂಟ. ಕುಂಡದಲ್ಲಿ ಬೆಳಗುವ ಅಗ್ನಿಯೇ ಜ್ಯೋತಿರ್ಮಯನಾದ ಭಗವಂತನ ಪ್ರತೀಕ. ಕುಂಡಕ್ಕೆ ಹೊಯ್ಯುವ ತುಪ್ಪವೆ ಪುರುಷವೀರ್ಯದ ಸಂಕೇತ ಅದರಿಂದ ಹೊಸಚೈತನ್ಯದ ಸೃಷ್ಟಿ. ಇದು ಸೃಷ್ಟಿಯಜ್ಞ ಇದು ವಾಮದೇವಯಜ್ಞ.

ಸ್ತ್ರೀಯೆ ಯಜ್ಞಕುಂಡ. ಪುರುಷನೇ ಘೃತಕುಂಭ. ಈ ಕುಂಡಕ್ಕೆ ಆ ಕುಂಭಧಾರೆಯೆರೆದಾಗ ಹೊಸಪಿಂಡದ ಉದಯ. ಇದೆ ಪಿಂಡಾಂಡದ ಸೃಷ್ಟಿ. ಇದರಂತೆಯ ಬ್ರಹ್ಮಾಂಡದ ಸೃಷ್ಟಿ. ಇಡಿಯ ವಿಶ್ವದ ಸೃಷ್ಟಿಯೆ ಒಂದು ಮಹಾಯಜ್ಞ. ಇದು ವೇದಗಳ ದೃಷ್ಟಿ. ಹೋಮ ಕುಂಡವೆ ಇಲ್ಲಿ ಮಂಡಲವಾಯಿತು. ಸ್ತ್ರೀ ಶಕ್ತಿಯೆ ತ್ರಿಕೋನವಾಯಿತು. ಪುರುಷ ಶಕ್ತಿಯೇ ವೃತ್ತವಾಯಿತು.

ವೃತ್ತ ತ್ರಿಕೋನಗಳ ಸಂಗಮದಿಂದ ಚತುಷ್ಕೋನ, ಪಂಚಕೋನಗಳ ನಿರ್ಮಾಣವಾಯಿತು. ಚತುಷ್ಕೋನವೇ ಚತುರ್ಮುಖನಾದ ಬ್ರಹ್ಮ ಪಂಚಕೋನವೆ ಪಂಚಮುಖನಾದ ಶಿವ. ಷಟ್‌ಕೋನವೆ ಷಣ್ಮುಖನಾದ ಸ್ಕಂದ. ಪ್ರಕೃತಿಯ ಮೂರು ಗುಣಗಳಿಂದ ಮುಮ್ಮುಖನಾಗಿ ರೂಪುಗೊಂಡ ಸೃಷ್ಟಿ ಚತುರ್ಮುಖನ ಅನಂತರ ನಾಲ್ಕು ಮುಖವಾಗಿ ವಿಸ್ತಾರಗೊಂಡಿತು. ನಾಲ್ಕು ವೇದಗಳು ನಾಲ್ಕು ವರ್ಣಗಳು; ನಾಲ್ಕು ಆಶ್ರಮಗಳು; ನಾಲ್ಕು ಪುರುಷಾರ್ಥಗಳು ಇತ್ಯಾದಿ ವಿಶ್ವಕ್ಕೆ ಒಂದು ಹೊಸ ನಾಲ್ಕನೆಯ ಆಯಾಮ.

ಮುಂದೆ ಶಿವನಿಂದ ಪಂಚಮುಖವಾಗಿ ಬೆಳೆಯಿತು, ಪಂಚಭೂತಗಳು; ಪಂಚತನ್ಮಾತ್ರಗಳು; ಪಂಚಜ್ಞಾನೇಂದ್ರಿಯಗಳು; ಪಂಚಕರ್ಮೇಂದ್ರಿಯಗಳು; ಪಂಚಪ್ರಾಣಗಳು; ಪಂಚ ಉಪಪ್ರಾಣಗಳು; ಪಂಚವಿಧ ಅಂತಃಕರಣಗಳು ಹೀಗೆ ಈ ಪಂಚ ಪಂಚಗಳಿಂದ ಪ್ರಪಂಚವಾಯಿತು.

ಪ್ರಪಂಚವೆಂಬ ಸಾಗರದಲ್ಲಿ ಕುಡೂರ್ಮಿಗಳು ಆರು ಅಲೆಗಳು ಬಂದವು. ಹಸಿವು, ಬಾಯಾರಿಕೆ, ದುಃಖ, ಮೋಹ, ಮುಪ್ಪು ರೋಗ. ಬದುಕಿಗೆ ಆರು ವಿಕಾರಗಳು ಬಂದವು :-- ಭ್ರೂಣಸ್ಥಿತಿ, ಹುಟ್ಟುವುದು, ಬೆಳೆಯುವುದು, ಬೆಳೆಯುತ್ತ ಬದಲಾಗುವುದು, ಬದಲಾಗುತ್ತ ಇಳಿಮುಖವಾಗಿ ಕುಸಿಯುವುದು ಮತ್ತೆ ಕೊನೆಗೊಮ್ಮೆಸಾಯುವುದು.

ಹೀಗೆ ಒಂದು ಮೂರಾಯಿತು. ಮೂರು ಮೂರಾ ಬಟ್ಟೆಯಾಗಿ ಆರಾಯಿತು. ಅದುವೇ ಬಾಳಾಯಿತು. ಆರು ಹೋಳಾಯಿತು. ಅರಿವು ಇರದಾಗ ಹಾಳಾಯಿತು. ಅರಿವು ಮೂಡಿದಾಗ ಪಾರಾಯಿತು. ಇದೇ ಬದುಕಿನ ಸಾಂಖ್ಯ. ಇದೇ ಬದುಕಿನ ಯೋಗ. ಇದೇ ಶಕ್ತಿ ಪೂಜೆಯ ರೇಖಾಗಣಿತ.

ಒಟ್ಟಿನಲ್ಲಿ ಸ್ತ್ರೀ ಶಕ್ತಿಯನ್ನು ಗೌರವಿಸುವ ದೇವರನ್ನು ತಾಯಿಯೆಂದು ಕಾಣುವ ಸಂಪ್ರದಾಯದ ಪದ್ಧತಿ ಈ ನವರಾತ್ರಿಯ ಹಬ್ಬ. ತಾಯಿದುರ್ಗೆ ಮಹಿಷಮರ್ದಿನಿಯಾದ ಸವಿನೆನಪು. ಮಹಿಷಾಸುರ ಇನ್ನೆಲ್ಲೋ ಇಲ್ಲ. ನಮ್ಮೊಳಗೇ ಇದ್ದಾನೆ. ನಮ್ಮಂತರಂಗಕ್ಕೇ ಲಗ್ಗೆಯಿಟ್ಟಿದ್ದಾನೆ. ಹೌದು; ಮಹಿಷ ಅಜ್ಞಾನದ ಪ್ರತೀಕವಲ್ಲವೇ? ಅವನು ಸತ್ತಿಲ್ಲ. ನಮ್ಮೊಳಗೆ ಅಡಗಿ ಕುಳಿತಿದ್ದಾನೆ. ಅವನ ಸಂಹಾರಕ್ಕಾಗಿ ತಾಯಿದುರ್ಗೆ ನಮ್ಮೆಡೆಗೆ, ನಮ್ಮೊಳಗೆ, ಇಳಿದು ಬರಬೇಕು. ಒಳಿತಿನ ಸೃಷ್ಟಿಗಾಗಿ ಕೆಡುಕಿನ ಸಂಹಾರ. ಸಂಹಾರ ಸೃಷ್ಟಿಯದೇ ಇನ್ನೊಂದು ಮಗ್ಗುಲು. ಅದಕ್ಕಾಗಿ ಮಹಿಷ ಮರ್ದಿನಿಯ ಆರಾಧನೆ, ಆದರೆ ಇದು ಸುಲಭದ ಕೆಲಸವಲ್ಲ.

ನಾವು ಸಲ್ಲಿಸಿದ ಪೂಜೆ ದುರ್ಗೆಗೆ ಸಲ್ಲುವ ಬದಲು ಮಹಿಷನಿಗೆ ಸಲ್ಲದಂತೆ ಎಚ್ಚರವಹಿಸಬೇಕು. ನಮ್ಮೆದುರು ಮಹಿಷನೂ ಇದ್ದಾನೆ. ಮಹಿಷಮರ್ದಿನಿಯೂ ಇದ್ದಾಳೆ. ಮಹಿಷಮರ್ದಿನಿಗೆ ಎರೆದ ಪಂಚಾಮೃತ ಮಹಿಷನ ತಲೆಗೂ ಬೀಳುತ್ತೆ. ಮಹಿಷಮರ್ದಿನಿಗೆ ಎತ್ತಿದ ಆರತಿ ಮಹಿಷನಿಗೂ ಸಲ್ಲುತ್ತೆ.

ನವರಾತ್ರಿಯಂದು ನಾವು ಯಾರಿಗೆ ಪೂಜೆ ಮಾಡುತ್ತೇವೆ? ಯಾರಿಗೆ ಪೂಜೆ ಮಾಡಿದೆವೋ ಅವರು ಒಲಿಯುತ್ತಾರೆ ಎಂಥ ಭಾವವೋ ಅಂಥ ಪೂಜೆ ಎಂಥ ಪೂಜೆಯೋ ಅಂಥ ಫಲ.

✿✿✿✿✿✿✿✿✿✿

# A HEALING TOUCH

## T. T. DEVASTHANAMS INTRODUCES
## SRI BALAJI AROGYAVARAPRASADINI SCHEME

For ages, Tirumala, the abode of Lord Venkateswara, has been a great centre of pilgrimage. Thousands of devotees visit the sacred hills every day and offer their solemn prayers to the Lord for their spiritual and physical well-being.

Alleviating human suffering has been a part of dedicated efforts of TTD to the mankind. TTD already manages a Leprosorium, centre for physically handicapped, a poor home and also a central hospital. To provide the most advanced medical technology to the needy, the TTD has launched another monument, a blessing from the Lord by opening Sri Venkateswara Institute of Medical Sciences -- a sophisticated super speciality centre on the lines of AIIMS of New Delhi & JIMPER of Pondicherry and PGI of Chandigarh. Total well being of man is the aim of Sri Venkateswara Institute of Medical Sciences, which apart from offering service, training and education in medical sciences, also encourages Research and development.

The doors to such a state of the art technology should be open to our poor and disabled brethren.

With a view to achieving this, Sri Venkateswara Institute of Medical Sciences has introduced a New scheme Balaji Arogyavaraprasadini Scheme. To accomplish the goal of proving the sophisticated medical technology to every individual at an affordable rate, we invite the generous co-operation of philanthropists and the general public.

### The Scheme in essence:

A donor can make an endowment of Rs. 1000/- or multiples thereof / Rs. 1 lakh / Rs. 5 lakhs / Rs. 10 lakhs to T.T. Devasthanams which will in turn contribute matching grant. The entire amount will be deposited in fixed deposit in a nationalised Bank and the interest accrued on it will be utilised for providing free medical services to the poor and the needy.

A Chair in Sri Venkateswara Institute of Medical Sciences will be named after the donor who contributes Rs. 10 lakhs or above. These endowment chairs are purely research oriented.

- Donations can be made by any individual / family / company / firms etc.
- The name of the donor who endows Rs. 5 lakhs or more will be displayed prominently in the Reception hall of the hospital.
- The discharge ticket of the benefited patient will carry the name of the donor.

### Additional Benefit and facilities :

- Donations to Sri balaji Arogyavaraprasadini Scheme are exempted from Income Tax under 80 (G).
- Paid rooms / Air conditioned rooms will be allotted to family members of the donor in the hospital.
- Paid rooms can be named after donors who contribute a sum of Rs. 5 lakhs or above.
- By paying Rs. 5 lakhs and above, a donor may sponsor one operation per year.
- Donors can sponsor feeding of the In-patients and out-patients. They may also sponsor a travel fellowship for the faculty per year.

All donations, by D.Ds. drawn in favour of The Executive Officer, T.T. Devasthanams, Tirupati-517 501 (Andhra Pradesh) should reach the Director, Sri Venkateswara Institute of Medical Sciences, Tirupati along with the following particulars.

- Name and address along with the latest passport-size photographs of the family members of the donor who contributes Rs. 1 lakh or more.
- Name and address of the person to whom Income Tax Exemption Certificate is to be issued.

The donors are also welcome to offer equipment, vehicles etc. to SVIMS or even sponsor health camps in rural areas, if they so desire. Further details can be had from

**The Executive Officer**
**T.T. Devasthanams, Tirupati**
**or**
**The Director**
**Sri Venkateswara Institute of Medical Sciences, Tirupati**

**EXECUTIVE OFFICER**



Srivari Mohini Avatharam

*Visit....*

# SRI PADMAVATHI DEVI TEMPLE

## TIRUCHANUR



### TEMPLE TIMINGS ON FRIDAYS

| | | | | |
|---|---|---|---|---|
| 5-00 a.m. | to | 5-30 a.m. | — | SUPRABHATAM |
| 5-30 a.m. | to | 6-30 a.m. | — | Sahasranama Archana<br>Nitya Archana & 1st Bell |
| 6-30 a.m. | to | 7-00 a.m. | — | Sadalimpu |
| 7-00 a.m. | to | 8-00 a.m. | — | ABHISHEKAM |
| 8-00 a.m. | to | 9-00 a.m. | — | Alankaram to Moolavarlu<br>2nd Bell |
| 9-00 a.m. | to | 8-00 p.m. | — | SARVADARSANAM |
| 6-00 p.m. | to | 8-00 p.m. | — | Procession and Unjal Seva |
| 8-00 p.m. | to | 8-30 p.m. | — | Night Kainkaryams & Night Bell |
| 8-30 p.m. | to | 9-00 p.m. | — | SARVADARSANAM |
| 9-00 p.m. | | | | Suddhi & Ekanta Seva |

***Note :***

7-00 a.m. to 8-00 a.m. — Grihasthas can participate in Abhishekam by paying Rs. 100/- per head.

Abhisheka Darsanam can be had on payment of Rs. 5/- per head.

# ಉಪ್ಪಿಲಪ್ಪನ್

---ಎ. ಪಂಕಜ.

ನಮ್ಮ ದೇಶದಲ್ಲಿ ಇರುವ ಪವಿತ್ರ ಪುಣ್ಯಕ್ಷೇತ್ರಗಳಿಗೂ ತೀರ್ಥಯಾತ್ರಾಸ್ಥಳಗಳಿಗೂ ಲೆಕ್ಕವಿಲ್ಲ. ಅದರಲ್ಲೂ ದಕ್ಷಿಣದೇಶಕ್ಕೆ ದೇವಾಲಯದ ನಗರೀ ಎಂದೇ ಕರೆಯುತ್ತಾರೆ. ಇಲ್ಲಿನ ದೇವಾಲಯಗಳು ಅತಿ ವಿಸ್ತಾರವಾಗಿ ಸುಂದರವಾದ ಗೋಪುರ, ಪ್ರಾಕಾರಗಳನ್ನು ಹೊಂದಿರುತ್ತವೆ. ಇಲ್ಲಿಯ ಭವ್ಯ ಶಿಲ್ಪಕಲೆಯನ್ನು ಎಷ್ಟು ವರ್ಣಿಸಿದರೂ ಸಾಲದು. ಇಂತಹ ಪ್ರಸಿದ್ಧ ಸ್ಥಳಗಳಲ್ಲಿ ಕುಂಭಕೋಣಂ ಸಹ ಒಂದಾಗಿದೆ. ಸಾರಂಗಪಾಣಿ, ಚಕ್ರಪಾಣಿ, ಪಟ್ಟಾಭಿರಾಮ, ಆಂಜನೇಯ ಲೆಕ್ಕವಿಲ್ಲದ ದೊಡ್ಡ ದೊಡ್ಡ ದೇವಾಲಯಗಳನ್ನು ಹೊಂದಿರುವ ಕುಂಭಕೋಣಕ್ಕೆ ನಾಲ್ಕು ಮೈಲಿ ದೂರ ಇರುವ 'ಉಪ್ಪಿಲ್ಲಪ್ಪನ್' ದೇವಾಲಯ ಸುಪ್ರಸಿದ್ಧ ಯಾತ್ರಾಸ್ಥಳ. ತಿರುಪತಿಯ ಶ್ರೀನಿವಾಸನ ಅಣ್ಣ ವೆಂಕಟಾಚಲಪತಿ ಇಲ್ಲಿ ನೆಲಸಿರುತ್ತಾನೆ. ದಕ್ಷಿಣದ ದೇಶದ ಆಳ್ವಾರುಗಳು ೧,೨೦೦ ವರ್ಷಗಳ ಹಿಂದೆಯೇ ಈ ದೇವರನ್ನು ಕುರಿತು ಪೊನ್ನಪ್ಪನ್, ಮಣಿಅಪ್ಪನ್, ಮುತ್ತಪ್ಪನ್, ಎನ್ನಪ್ಪನ್ ಎಂದು ೩೪ ಪಾಶುರಗಳನ್ನು ಹಾಡಿ ಮಂಗಳಾಶಾಸನ ಮಾಡಿರುತ್ತಾರೆ.

ಬ್ರಹ್ಮಾಂಡ ಪುರಾಣದಲ್ಲಿ ಈ ಊರಿಗೆ ವೈಕುಂಠನಗರ, ಆಕಾಶನಗರ, ತಿರುವಿಣ್‌ನಗರ, ಓಪಿಲಿಯಪ್ಪನ್ ಸನ್ನಿಧಿ, ಎಂದೆರುಮಾನ್ ಸನ್ನಿಧಿ ಎಂದು ಕರೆಯಲಾಗಿದೆ. ಭಕ್ತಾದಿಗಳು ಬಂದು ಆ ದೇವಾಲಯದ ಹೊರಗೆ ನಿಂತು ತಲೆ ಎತ್ತಿ ನೋಡಿದಾಗ ಎತ್ತರದ ಅಲಂಕೃತ ಗೋಪುರ ಮನ ಸೆಳೆಯುತ್ತೆ. ಅತಿ ಎತ್ತರದ ಹಿತ್ತಾಳೆಸಹಿತವಾದ ಎರಡು ಬಾಗಿಲುಗಳು ವಿಶಾಲವಾಗಿದೆ. ಇದರ ಒಳಹೊಕ್ಕಾಗ ಬಲಭಾಗದಲ್ಲಿ ಅಹೋರಾತ್ರಿ ಪುಷ್ಕರಿಣಿಯನ್ನು ಕಾಣಬಹುದು. ಶಾರದಾತೀರ್ಥ, ಸೂರ್ಯತೀರ್ಥ, ಇಂದಿರ, ಮತ್ತು ಬ್ರಹ್ಮತೀರ್ಥಗಳ ಸಂಗಮವಾಗಿರುವ ಈ ಕೊಳವನ್ನು ದಕ್ಷಿಣದ ಗಂಗೆ, ಯಮುನೆ, ಗೋದಾವರಿ ಎಂದು ಹೆಸರಿಸಲಾಗಿದೆ. ಈ ಕೊಳದಲ್ಲಿ ಅನೇಕ ಮೀನುಗಳು ತುಂಬಿದ್ದು ಇದರ ನೀರು ಸದಾ ಸ್ವಚ್ಛವಾಗಿರುತ್ತದೆ. ದೇವಾಲಯ ಪ್ರವೇಶ ದ್ವಾರದ ಎಡಭಾಗಕ್ಕೆ ತೆಂಗು, ಹಲಸು, ಮಾವು, ಬಾಳೆಯ ಪಕ್ವ ಫಲಗಳುಳ್ಳ ಗಿಡಗಳೂ, ತುಲಸೀ, ಮಲ್ಲೆ, ಜಾಜಿ, ಗುಲಾಬಿಯ ಹೂಗಿಡಗಳೂ ಇರುವ ಸಮೃದ್ಧ ಹಸಿರು ವನರಾಶಿ. ಈ ಸಸ್ಯಶ್ಯಾಮಲಯ ನಡುವೆ ದೇವರಿಗೆ ನಡೆಯುವ ವಸಂತೋತ್ಸವದ ದೃಶ್ಯ ಅತಿ ರಮ್ಯ.

ಗರುಡಗಂಬದ ಮುಂದೆ ಅಷ್ಟದಳದ ಕಲ್ಲಿನ ಮೇಲೆ, ದೇವರ ಎದುರು ನಿಂತಿರುವ ಪುಟ್ಟದೇವ ಕೃಷ್ಣ. ಅವನ ಮುಂದೆ ಇರುವ ಶಿಲಾಪಾದುಕೆಗಳಲ್ಲಿ ಭಕ್ತರ ಹರಕೆಯ ಉಪ್ಪು, ಮೆಣಸುಗಳ ರಾಶಿ, ಮುಂದೆ ನಡೆದಾಗ ಒಂದಲ್ಲ ಎರಡಲ್ಲ ಮೂರು ದ್ವಾರಗಳಲ್ಲೂ ಜಯವಿಜಯರು.

ದೇವಾಲಯದ ಒಳಪ್ರಾಕಾರದಲ್ಲಿ ತೈಲವರ್ಣದ ತಿರುಪ್ಪಾವೈನ ದೃಶ್ಯಗಳು, ಗೋಪಿಕೆಯರ ಕಾತ್ಯಾಯನೀ ವ್ರತದ ವಿವಿಧ ಭಂಗಿಗಳ ವರ್ಣಚಿತ್ರಗಳು, ಸುಪ್ರಭಾತ, ನದೀಸ್ನಾನ, ರಾಸಕ್ರೀಡೆ, ಕೃಷ್ಣ ಜನನ ಇವುಗಳೊಂದು ಕಡೆ ಆದರೆ, ಮತ್ತೊಂದು ಪಾರ್ಶ್ವದ ಗೋಡೆಯ ಮೇಲೆ ಆಶ್ರಮಗಳು, ದಶಾವತಾರ, ಆಂಡಾಳ್‌ನ ಚಿತ್ರಗಳು. ನಂತರ ಶ್ರೀರಾಮ ಪಟ್ಟಾಭಿಷೇಕದ ಶೇಷ ಮಹಲ್.

ಬಹು ಪುರಾತನವಾದ ಈ ದೇವಾಲಯದ ಕಥೆ ಸುಂದರವಾಗಿದೆ. ಇಲ್ಲಿಯ ಶ್ರೀನಿವಾಸ ಅತಿ ಎತ್ತರ, ಭವ್ಯನಿಲುವಿನ, ತೇಜೋವಂತ, ಸುಂದರ ಪುರುಷ, ಜ್ಞಾನವೃದ್ಧನಂತೆ ನಿಂತು ಭಕ್ತರನ್ನು ತನ್ನೆಡೆಗೆ ಆಕರ್ಷಿಸುತ್ತಾನೆ. ಇದು ಮಾರ್ಕಂಡೇಯ ಕ್ಷೇತ್ರ. ಮಾರ್ಕಂಡೇಯ ಮುನಿಗಳಿಗೆ ಭೂಮಿಯಲ್ಲಿ ಹೆಣ್ಣುಮಗು ಸಿಕ್ಕಿತು. ಬಹಳ ಪ್ರೀತಿಯಿಂದ ಆ ಮಗುವನ್ನು ಅವರು ಸಾಕಿದರು. ಭೂಮಿಯಲ್ಲಿ ಸಿಕ್ಕ ಇವಳಿಗೆ ಭೂದೇವಿ, ಭೂಮಾದೇವಿ, ನಾಚ್ಚಾರಮ್ಮ, ಧರಣೀದೇವಿ, ವಸುಂಧರಾ ಎಂದು ಹಲವು ನಾಮಗಳು, ಮಗಳಿಗೆ ಐದು ವರ್ಷಕ್ಕೆ ಬಂತಲ್ಲಾ, ಇನ್ನು ಇವಳ ವಿವಾಹಕ್ಕೆ ತಕ್ಕ ಗಂಡು ಎಲ್ಲಿರುವನು ಎಂಬ ಯೋಚನೆ ಮಾರ್ಕಂಡೇಯರಿಗೆ, ಇವರ ಬಳಿ ಅತಿಥಿ ಆಗಿ ಬಂದಿದ್ದ ಶ್ರೀನಿವಾಸನ ಬಳಿ ತಮ್ಮ ಅಳಲನ್ನು ತೋಡಿಕೊಂಡರು. ಅವಳನ್ನು ತಾನೇ ವಿವಾಹವಾಗುವುದಾಗಿ ಶ್ರೀನಿವಾಸ ಹೇಳಿದ. ಮಾರ್ಕಂಡೇಯರು ಚಿಂತಾಕ್ರಾಂತರಾದರು. ಇನ್ನೂ ಐದೂ ತುಂಬದ ನನ್ನ ಮಗಳಿಗೆ ಅಡಿಗೆ ಮಾಡುವಾಗ ಉಪ್ಪು ಹಾಕಬೇಕು ಎಂದೂ ತಿಳಿಯದ ವಯಸ್ಸು ಅವಳನ್ನು ನಿಮಗೆ ಹೇಗೆ ಕೊಡಲಿ" ಎಂದ ಮುನಿ ವಾಕ್ಯ ಕೇಳಿ ಶ್ರೀನಿವಾಸ ನಕ್ಕುಬಿಟ್ಟನು. ನಂತರ, "ಚಿಂತೆಯಿಲ್ಲ. ಅವಳು ಉಪ್ಪುಹಾಕದೆ ಮಾಡಿದ ಅಡಿಗೆಯೇ ನನಗೆ ರುಚಿ. ಇಂದಿನಿಂದ ನನಗೆ ಯಾವಕಾಲಕ್ಕೂ ಉಪ್ಪಿಲ್ಲದ ಅಡಿಗೆಯ ನೈವೇದ್ಯವೇ ಆಗಲಿ" ಎಂದನು.

ಈ ರೀತಿ ಭೂಮಾದೇವಿ ಮತ್ತು ಶ್ರೀನಿವಾಸರ ವಿವಾಹವಾಯಿತು. ಇದು ನಡೆದ ಸತ್ಯ ಘಟನೆ ಎಂಬುದಕ್ಕೆ ಸಾಕ್ಷಿರೂಪದಂತೆ, ಈ ದೇವಾಲಯದಲ್ಲಿ ನಡುವೆ ಆಜಾನುಬಾಹು ಶ್ರೀನಿವಾಸ ಅವನ ಬಲಕ್ಕೆ ಕುಳಿತಿರುವ ಭೂಮಿದೇವಿ ಎಡಗಡೆಗೆ ಮಾರ್ಕಂಡೇಯ ಋಷಿಗಳ ವಿಗ್ರಹ ಇರುವುದನ್ನು ನಾವು ಈಗಲೂ ಕಾಣಬಹುದು.

ಈ ದೇವಾಲಯದಲ್ಲಿ ಫಾಲ್ಗುಣ ಮಾಸ ಏಕಾದಶಿಯಂದು ಓಣಂ, ನಕ್ಷತ್ರದಲ್ಲಿ ಮಧ್ಯಾಹ್ನ ೧೨ ಗಂಟೆಗೆ ಶ್ರೀನಿವಾಸನ ಜನನ ಎಂದು ರಥೋತ್ಸವ ನಡೆಯುತ್ತದೆ. ಬ್ರಹ್ಮೋತ್ಸವ, ಕಲ್ಯಾಣೋತ್ಸವ. ವಸಂತೋತ್ಸವಗಳೂ ನಡೆಯುತ್ತಲೇ ಇರುತ್ತವೆ.

ಓಪಿಲಪ್ಪನ್, ಎಂದರೆ ಅವನಿಗೆ ಸಮಾನರು ಇನ್ನುಯಾರೂ ಇಲ್ಲ ಎಂದು ಅರ್ಥ. ಈ ದೇವ ತಿರುಪತಿಯ ಶ್ರೀನಿವಾಸನಿಗೆ ಹಿರಿಯಣ್ಣನಂತೆ. ಇಲ್ಲಿ ಹರಕೆ ಹೊತ್ತರೆ ದೇರೆಲ್ಲೂ ಸಲ್ಲಿಸಲು ಆಗದು ಎಂದೂ ಹೇಳುತ್ತಾರೆ.

ಒಟ್ಟಿನಲ್ಲಿ ನಯನ ಮನೋಹರವಾದ, ಭವ್ಯನಿಲುವಿನ ಈ ಓಪಿಲ್‌ಪ್ಪನ್ ಅಥವಾ ಉಪ್ಪಿಲಪ್ಪನ್ ಸ್ವಾಮಿಯನ್ನು ಜೀವನದಲ್ಲಿ ಒಮ್ಮೆ ಆದರೂ ನೋಡಿ ಬಂದರೆ ಜೀವನ ಸಾರ್ಥಕ, ಧನ್ಯ ಎಂದು ಅನಿಸುತ್ತೆ.

★★★★★★★★★★★★★★★★★★★★★★★★★★★

ಶರಧಿಸುತೆ ಸನಕಾದಿ ವಂದಿತೆ ಸುರ ನರೋರಗ ಮಾತೆ ಸುಜನರ
ಪೊರೆವ ದಾತೆ ಸುರಾಗ್ರಗಣ್ಯ ಸುಮೌನಿ ವರಸ್ತುತ್ಯೆ
ಪರಮ ಕರುಣಾಸಿಂಧು ಪಾವನ ಚರಿತೆ ಪದ್ಮಜ ಮುಖ್ಯ ಸಕಲಾ
ಮರಸುಪೂಜಿತೆ ಲಕ್ಷ್ಮಿ ಕೊಡುಗೆಮಗಧಿಕ ಸಂಪದವ

-ಕುಮಾರವ್ಯಾಸಭಾರತ.

★★★★★★ ★★★★★★★★★★★★★★★★★★★★★

ಸಂದರ್ಶಿಸಿ ಆನಂದಿಸಿ

# ಪ್ರಾಕ್ತನ ವಸ್ತು ಸಂಗ್ರಹಾಲಯ

ಸನಾತನ ಧರ್ಮದ ಮೌಲ್ಯ, ಹಿರಿಮೆ, ಪರಂಪರೆ, ಸಂಸ್ಕೃತಿಗಳ ಪ್ರಸಾರದಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳು ಹಲವು ರೀತಿಯಲ್ಲಿ ಕೆಲಸಮಾಡುತ್ತಿದ್ದು, ಈ ಉದ್ದೇಶ ಸಾಧನೆಗಾಗಿ ತಿರುಮಲೆ ಹಾಗೂ ತಿರುಪತಿಗಳಲ್ಲಿ ಪುರಾವಸ್ತು ಪ್ರದರ್ಶನಶಾಲೆಗಳನ್ನು ಏರ್ಪಡಿಸಲಾಗಿದೆ.

ತಿರುಮಲೆಯ ಸಾವಿರ ಕಂಬದ ಸಂಭಾಂಗಣದಲ್ಲಿ ತಿರುಪತಿ ತಿರುಮಲೆಗಳ ಪರಿಸರದಲ್ಲಿ ದೊರೆತ ಎಲ್ಲ ಪುರಾವಸ್ತುಗಳನ್ನು, ಮಾನವ ಶಾಸ್ತ್ರ, ಪ್ರಾಕ್ ವಸ್ತುಗಳನ್ನೂ ನೆಲ, ಸಸ್ಯಗಳ ಬಗೆಗಳನ್ನೂ, ವಾಸ್ತು ವಿಗ್ರಹ ಶಿಲ್ಪಗಳನ್ನೂ ದೇವಾಲಯಗಳ ಆಚಾರ ವಿಚಾರಗಳನ್ನೂ ಸಂಗ್ರಹಿಸಲಾಗಿದೆ. ಇಲ್ಲಿ ಅಪರೂಪದ ಮರದ ಕೆತ್ತನೆಗಳೂ, ಶಿಲ್ಪಗಳೂ, ಲೋಹ ವಿಗ್ರಹಗಳೂ, ಸಂಗೀತದ ವಿವಿಧ ಪ್ರಾಚೀನ ವಾದ್ಯವಿಶೇಷಗಳೂ, ತಿ.ತಿ.ದೇ. ಮತ್ತಿತರ ಕಡೆಗಳಲ್ಲಿ ದೊರೆತ ಆಯುಧಗಳೂ ಪ್ರದರ್ಶಿತವಾಗಿವೆ. ಬೇರೆ ಬೇರೆ ಜಮೀಂದಾರರಿಂದ ದಿವಂಗತ ವೇಟೂರಿ ಪ್ರಭಾಕರಶಾಸ್ತ್ರಿಯವರು ಸಂಗ್ರಹಿಸಿದ ವಸ್ತುಗಳೂ ಇಲ್ಲಿವೆ. ೧೯೮೦ ಡಿಸೆಂಬರ್ ೨೭ ರಂದು ಅಂದಿನ ರಾಷ್ಟ್ರಾಧ್ಯಕ್ಷರಾಗಿದ್ದ ಶ್ರೀ ಎನ್. ಸಂಜೀವರೆಡ್ಡಿಯವರು ಈ ವಸ್ತು ಪ್ರದರ್ಶನ ಶಾಲೆಯನ್ನು ಉದ್ಘಾಟಿಸಿದರು.

ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಬಳಿಯ ಕಚೇರಿನಮ್ಮಾಳ್ವಾರ್ ದೇವಾಲಯದ ಪೆರಿಯಾಳ್ವಾರ್ ಮಂಟಪದಲ್ಲಿ, ವೈಷ್ಣವ ದೇವಾಲಯ ಕಲೆಗೆಂದು ಮೀಸಲಾದ ಶ್ರೀ ವೆಂಕಟೇಶ್ವರ ವಾಸ್ತುಕಲಾವಸ್ತು ಸಂಗ್ರಹಾಲಯವನ್ನು ಏರ್ಪಡಿಸಲಾಗಿದೆ. ಈ ಸಂಗ್ರಹಾಲಯದಲ್ಲಿ ವೈಷ್ಣವತೆಯ ವೈಶಿಷ್ಟ್ಯವನ್ನು ವಿವರಿಸಲು ಪ್ರಯತ್ನಿಸಲಾಗಿದೆ. ಇದರ ಹಲವು ವಿಭಾಗಗಳೆಂದರೆ---

ವಾಸ್ತುಶಾಸ್ತ್ರ : ಈ ವಿಭಾಗದಲ್ಲಿ ದೇವಾಲಯ ನಿರ್ಮಾಣದಲ್ಲಿನ ಯೋಜನಾವಿವರಗಳನ್ನು ನೀಡಲಾಗಿದೆ. ಆಗಮ ಹಾಗೂ ಶಿಲ್ಪಶಾಸ್ತ್ರಗಳು ದೇವಾಲಯದ ನಿರ್ಮಾಣದ ಸ್ಥಳ ನಿರ್ಧಾರ, ಭೂಶುದ್ಧಿ, ವಿಗ್ರಹಗಳ ದಿಕ್ಕು ಹಾಗೂ ಭೂಮಿಯ ನಿರ್ದೇಶನಗಳನ್ನು ನೀಡಿದ್ದು, ಸೂಕ್ತ ವಿವರ ಪಟ್ಟಿಗಳು ಹಾಗೂ ಮಾದರಿಗಳಿಂದ ಈ ವಿವರಗಳನ್ನು ಸ್ಪಷ್ಟಪಡಿಸಲಾಗಿದೆ.

ಶಿಲ್ಪಶಾಸ್ತ್ರ : ಈ ವಿಭಾಗದಲ್ಲಿ ವಿಗ್ರಹಗಳ ಉದ್ದಳತೆಗಳು ಸಾಪೇಕ್ಷವಾದುದೆಂಬುದನ್ನು ವಿವರಿಸಿ ಅವು ಸ್ಥಳೀಯ ಹಾಗೂ ಯಾಜಮಾನ್ಯವನ್ನು ಅನುಸರಿಸುವುದೆಂದು ವಿವರಿಸಲಾಗಿದೆ.

ವಿಗ್ರಹಗಳು : ವಿಷ್ಣುವಿನ ಹಲವಾರು ರೂಪಗಳ, ಭಂಗಿಗಳೂ, ಆಭರಣಗಳೂ ವ್ಯಾವೃತವಾಗಿವೆ.

ಆಳ್ವಾರ್‌ಗಳು : ವಿಶಿಷ್ಟಾದ್ವೈತ ತತ್ತ್ವದ ಪ್ರಪತ್ತಿ ಮಾರ್ಗಕ್ಕೆ ಆಳ್ವರರ ಸಂದೇಶಗಳೇ ಆಧಾರ. ಶ್ರೀ ರಾಮಾನುಜಾಚಾರ್ಯರು ಆಳ್ವಾರರನ್ನು ಆರಾಧಿಸುತ್ತಿದ್ದರು.

ಸಮಯಾಚಾರಗಳು : ಸನಾತನದ ಧರ್ಮದಲ್ಲಿ ಹುಟ್ಟಿನಿಂದ ಸಾವಿನವರೆಗೆ ಹದಿನಾರು ಸಂಸ್ಕಾರಗಳಿಗೆ ಪ್ರಾಮುಖ್ಯವಿದೆ. ವಿಷ್ಣುದೇವಾಲಯದಲ್ಲಿ ಬಳಸಲಾಗುವ ಎಲ್ಲ ಪರಿಕರಗಳ ವಿವರಗಳೂ, ಹೋಮ ಕುಂಡ ಹಾಗೂ ವಾಹನಗಳ ಮಾದರಿಗಳೂ ಇವೆ. ೧೦೮ ದಿವ್ಯಕ್ಷೇತ್ರಗಳೂ ೧೦೮ ತಿರುಪತಿಗಳೆಂದೇ ಪ್ರಸಿದ್ಧವಾಗಿರುವ ವೈಷ್ಣವ ಕ್ಷೇತ್ರಗಳ ಚಿತ್ರಗಳ ಮೂಲಕ ಈ ದೇವಾಲಯಗಳ ವಾಸ್ತುಶಿಲ್ಪದ ಪರಿಚಯವನ್ನು ನೀಡಲಾಗಿದೆ.

ಕಲೆ : ಹರಿದಾಸರ ಹಿರಿಮೆಯನ್ನೂ; ಭರತನಾಟ್ಯಾದಿ ಕಲೆಗಳನ್ನೂ ವಿವರಿಸಲಾಗಿದೆ. ವಿಷ್ಣು, ಶಕ್ತಿ, ಷಣ್ಮುಖ, ಮೊದಲಾದ ೬ನೇ ಶತಕದ ವಿಗ್ರಹಗಳಿಂದ ಆರಂಭವಾದ ಸಂಗ್ರಹ ಆಕರ್ಷಕವಾಗಿದೆ. ೩ನೇ ರಾಜರಾಜನ ಕುಂತ್ರಪಾಕಂ ದೇವಾಲಯದಿಂದ ಸಂಗ್ರಹಿತವಾದ ಚಾರಿತ್ರಿಕ ವಿವರಗಳಿವೆ.

ಪರಂಪರೆಯ ಪರಿಚಯ ಹೊಂದಿರಿ --- ಒಮ್ಮೆ ಭೇಟಿ ನೀಡಿರಿ.

---

ಕಾಲ : ಬೆಳಗ್ಗೆ ೮ ರಿಂದ
ರಾತ್ರಿ ೮ ರ ವರೆಗೆ

ಟಿಕೆಟ್ ರೂ. ೧--೦೦ (ಹಿರಿಯರಿಗೆ)
" " ೦--೫೦ (ಕಿರಿಯರಿಗೆ)

# ಶ್ರೀ ವೈಷ್ಣವ ೧೦೮ ದಿವ್ಯದೇಶಗಳ ದಿವ್ಯದಂಪತಿಗಳು

---ಆರ್. ಕೃಷ್ಣಮಾಚಾರ್.

'ಮಾನವ ಜನ್ಮ ದೊಡ್ಡದು, ಇದ ಹಾನಿ ಮಾಡಲು ಬೇಡಿ ಹುಚ್ಚಪ್ಪಗಳಿರಾ' ಎಂದು ದಾಸ ವರೇಣ್ಯರಾದ ಪುರಂದರ ದಾಸರು ಅಪ್ಪಣೆ ಕೊಟ್ಟಿದ್ದಾರೆ. ಅನೇಕ ಜನುಮಗಳ ನಂತರ ಲಭಿಸಿದ ಈ ಮಾನವ ಜನ್ಮ ಆದ್ದರಿಂದಲೇ ಈ ಜನ್ಮವನ್ನು ಸಾರ್ಥಕಪಡಿಸಿಕೊಳ್ಳಬೇಕು. ಜನ್ಮಸಾರ್ಥಕ್ಯವನ್ನು ಪಡೆಯುವುದು ಹೇಗೆಂದು ತಿಳಿದುಕೊಳ್ಳುವುದು ಮಾನವನ ಪ್ರಥಮ ಕರ್ತವ್ಯ

ಭಗವಂತನು ಸರ್ವಾಂತರ್ಯಾಮಿ. ಅವನು ಅನುಗ್ರಹಿಸಿದ ಈ ಜನ್ಮದಲ್ಲಿ ಅವನನ್ನು ಸ್ತುತಿಸಿ, ಧ್ಯಾನಿಸಿ, ಅವನ ನಾಮ ಜಪಮಾಡಿ, ಅವನು ಅರ್ಚಾರೂಪಿಯಾಗಿ ನಿಂತಿರುವ ದೇವಾಲಯಗಳನ್ನು ಸಂದರ್ಶಿಸಿ ಅವನ ಮೂರ್ತಿಗಳಲ್ಲಿ ದರ್ಶನವನ್ನು ಸಾಕ್ಷಾತ್ಕರಿಸಿಕೊಂಡು ಐಹಿಕ ಆಮುಷ್ಮಿಕ ಫಲಗಳನ್ನು ಪಡೆದು ಆ ದೇವನಲ್ಲಿಯೇ ಸೇರಿದರೆ ಮಾತ್ರ ಜನ್ಮಸಾರ್ಥಕವಾಗುವುದು.

ನಮ್ಮ ಭರತಖಂಡವು ಪುಣ್ಯಭೂಮಿ, ಭಾರತ ಮಾತೆಯು ಪಾವನಿ, ಆ ತಾಯಿಯ ಉದ್ದಗಲಕ್ಕು ವ್ಯಾಪಿಸಿರುವ ನದಿಗಳ, ಗಿರಿಪರ್ವತಗಳ, ನದೀಸಂಗಮಗಳಲ್ಲಿ ಕಾಣಸಿಗುವ ದೇವಾಲಯಗಳಲ್ಲಿ ಭಗವಂತನು ಅರ್ಚಾರೂಪಿಯಾಗಿ ನಿಂತು ದರ್ಶನಕ್ಕಾಗಿ ಬರುವ ಭಕ್ತವೃಂದಕ್ಕೆ ವರಗಳನ್ನು ದಯಪಾಲಿಸಿ ಇಷ್ಟಾರ್ಥ ಪ್ರಾಪ್ತಿಯನ್ನು ಅನಿಷ್ಟಾರ್ಥ ನಿವಾರಣೆಯನ್ನೂ ಉಂಟುಮಾಡುತ್ತಿದ್ದಾನೆ. ಆದ್ದರಿಂದ ಮಾನವರೆಲ್ಲರೂ ತೀರ್ಥಯಾತ್ರೆ ಮಾಡಿ ತೀರ್ಥಕ್ಷೇತ್ರಗಳನ್ನೂ ಪುಣ್ಯಸ್ಥಳಗಳನ್ನು ಸಂದರ್ಶಿಸಿ ಭಗವಂತನನ್ನು ಸಾಕ್ಷಾತ್ಕರಿಸಿಕೊಂಡು ಜನ್ಮಸಾರ್ಥಕ ಪಡಿಸಿಕೊಳ್ಳಬೇಕು.

ಭಗವಂತನು ಸರ್ವವ್ಯಾಪಿಯಾದ್ದರಿಂದ ತೀರ್ಥಯಾತ್ರೆಗಳೇಕೆ ಎಂದು ಅಲಕ್ಷಿಸದೆ ಅವುಗಳ ಅವಶ್ಯಕತೆಯನ್ನು ಅರಿಯಬೇಕು. ಭಗವಾನ್ ರಾಮಕೃಷ್ಣಪರಮಹಂಸರು ತಿಳಿಸಿರುವಂತೆ, "ಹಸುವಿನಲ್ಲಿರುವ ಹಾಲನ್ನು ಪಡೆಯಬೇಕಾದರೆ ಅದರ ಕೆಚ್ಚಲನ್ನು ಹಿಂಡಿದರೆ ಮಾತ್ರ ನಮಗೆ ಲಭ್ಯ". ಆದ್ದರಿಂದ ತೀರ್ಥಯಾತ್ರೆ ಮಾಡಿ ವಿವಿಧ ರೂಪಗಳಲ್ಲಿ ಅಭಿವ್ಯಕ್ತಗೊಂಡಿರುವ ಭಗವಂತನನ್ನು ವಿಧ ವಿಧವಾಗಿ ಕೊಂಡಾಡಿ ಇಹಪರ ಸಾಧನೆಗಳನ್ನು ಗಳಿಸೋಣ. (ಈ ದಿಸೆಯಲ್ಲಿ ನಮಗೆ ಡಾ|| ಎನ್. ಅನಂತರಂಗಾಚಾರ್‌ರವರು ಬರೆದಿರುವ "ಭಾರತೀಯ ತೀರ್ಥಕ್ಷೇತ್ರ ಸಂದರ್ಶಿನಿ" ಪುಸ್ತಕವು ದಾರಿದೀಪವಾಗುತ್ತದೆ.)

ವಿಶಿಷ್ಟಾದ್ವೈತ ಪಂಥದ ಶ್ರೀ ವೈಷ್ಣವರಿಗೆ ಶ್ರೀಮನ್ಮಹಾವಿಷ್ಣುವು ನೆಲೆಸಿರುವ ದಿವ್ಯದೇಶಗಳು ಬಹು ಮುಖ್ಯ. ಇವುಗಳ ಸಂದರ್ಶನ ಒಂದು ಪವಿತ್ರ ಕಾರ್ಯ, ಜೀವನೋದ್ದೇಶ ಎಂಬುದೇ ಹಿರಿಯರೆಲ್ಲರ ಅಭಿಮತ.

ಶ್ರೀ ವೈಷ್ಣವ ದಿವ್ಯದೇಶಗಳಲ್ಲಿ, ೧೦೮ ದಿವ್ಯದೇಶಗಳು ಶ್ರೀ ವೈಷ್ಣವರು ಸಂದರ್ಶಿಸಲೇಬೇಕಾದ ಪರಮ ಪವಿತ್ರ ಸ್ಥಳಗಳು.

ಶ್ರೀವೈಷ್ಣವರು ಪ್ರತಿದಿನವೂ--

ಶ್ರೀರಂಗ ಮಂಗಳ ಮಣಿಂ  
ಕರುಣಾನಿವಾಸಂ,  
ಶ್ರೀ ವೇಂಕಟಾದ್ರಿ ಶಿಖರಾಲಯ  
ಕಾಳಮೇಘಂ  
ಶ್ರೀ ಹಸ್ತಿ ಶೈಲ ಶಿಖರೋಜ್ವಲ  
ಪಾರಿಜಾತಂ,  
ಶ್ರೀಶಂ ನಮಾಮಿ ಶಿರಸಾ  
ಯದುಶೈಲ ದೀಪಂ

ಅನುಸಂಧಾನಮಾಡುವ ನಾಲ್ಕು ಮುಖ್ಯ ದಿವ್ಯದೇಶಗಳೇ ಆದ ಶ್ರೀರಂಗಂ, ತಿರುಮಲೆ-ತಿರುಪತಿ, ಕಾಂಚೀಪುರ ಮತ್ತು ಯಾದವಾದ್ರಿ (ಮೇಲುಕೋಟೆ - ತಿರುನಾರಾಯಣಪುರ) ಗಳೇ ಅಲ್ಲದೆ, ಇನ್ನೂ ೧೦೪ ದಿವ್ಯದೇಶಗಳನ್ನು ಸಂದರ್ಶನ ಮಾಡಿ, ಮುಮುಕ್ಷುಗಳಾಗಿ ತಮ್ಮ ಮಂದಮತಿಯನ್ನು ನಿವೃತ್ತಿಮಾಡಿಕೊಂಡು ಮೋಕ್ಷಪ್ರಾಪ್ತಿ ಹೊಂದಿ ಎಂದು ಶ್ರೀ ವೈಷ್ಣವ ಪರಮಭಕ್ತರಾದ ಆಳ್ವಾರಾಚಾರ್ಯರು ತಿಳಿಸಿರುತ್ತಾರೆ.

ಆದ್ದರಿಂದ, ಶ್ರೀವೈಷ್ಣವರ ೧೦೮ ದಿವ್ಯದೇಶಗಳ ಪರಿಚಯ ಮಾಡಿಕೊಳ್ಳುವುದು ಪ್ರತಿಯೊಬ್ಬ ಶ್ರೀವೈಷ್ಣವನ ಆದ್ಯಕರ್ತವ್ಯ.

(ಈ ದಿಸೆಯಲ್ಲಿ ವಿದ್ವಾನ್ 'ರಘುಸುತ'ರು ಬರೆದಿರುವ 'ಶ್ರೀವೈಷ್ಣವ ೧೦೮ ದಿವ್ಯದೇಶಗಳು' ಪುಸ್ತಕವು ನಮಗೆ ನೆರವಾಗುತ್ತದೆ.)

ಲೀಲಾವಿಭೂತಿಯಲ್ಲಿ ೧೦೬ ಮತ್ತು ನಿತ್ಯವಿಭೂತಿಯಲ್ಲಿ ಒಂದು ಆಗಿ ವಿರಾಜಿಸುವ ೧೦೮ ದಿವ್ಯದೇಶಗಳನ್ನು, ಚೋಳ ದೇಶದಲ್ಲಿ - ೪೦, ಪಾಂಡ್ಯ ದೇಶದಲ್ಲಿ-೮, ಕೇರಳ ದೇಶದಲ್ಲಿ-೧೩, ಮಧ್ಯದೇಶದಲ್ಲಿ-೨, ಮತ್ತು ತಿರುನಾರಾಯಣಪುರದಲ್ಲಿ ನಿಂತವಿಭೂತಿಯಾಗಿ ಒಂದನ್ನೂ ನಾವು ಕಾಣುತ್ತೇವೆ. ಇತರ ಕಡೆಗಳಲ್ಲಿ 44 ನ್ನೂ ಕಾಣುತ್ತೇವೆ.

ಸೃಷ್ಟಿಕರ್ತನಾದ ಸಾಕ್ಷಾತ್ ಬ್ರಹ್ಮನಿಂದ ಅನುಗ್ರಹೀತನಾಗಿ ನಾರದ ಮಹರ್ಷಿಯು ಈ ೧೦೮ ದಿವ್ಯದೇಶಗಳನ್ನು ಸಂದರ್ಶಿಸಿ ಅಲ್ಲಿಯ ಅನೇಕ ರೂಪಗಳಲ್ಲಿ ನೆಲೆಸಿರುವ ದಿವ್ಯದಂಪತಿಗಳನ್ನು ಸಾಕ್ಷಾತ್ಕರಿಸಿಕೊಂಡು ಪರಮಾನಂದವನ್ನು ಪಡೆದರು.

ತದನಂತರ, ಕಾಲಾನುಕಾಲಗಳಲ್ಲಿ ದ್ವಾದಶಾಳ್ವಾರರು ಈ ದಿವ್ಯದೇಶಗಳನ್ನು ಸಂದರ್ಶಿಸಿ ಅಲ್ಲಿ ವಿರಾಜಮಾನರಾಗಿರುವ ದಿವ್ಯದಂಪತಿಗಳ ವರ್ಣನೆಯನ್ನು ತಮ್ಮ ದಿವ್ಯ ಪಾಶುರಗಳಲ್ಲಿ ಶ್ರೀವೈಷ್ಣವರಿಗೆ ಕರುಣಿಸಿದ್ದಾರೆ. ಇವೇ ನಾಲಾಯಿರ (೪೦೦೦) ದಿವ್ಯಪ್ರಬಂಧಗಳು ಎಂದು ಪ್ರಸಿದ್ಧವಾಗಿವೆ.

೧೦೮ ದಿವ್ಯದೇಶಗಳನ್ನು ಸಂದರ್ಶಿಸಲು ಅವಕಾಶವಾಗದೆ ಇರುವವರು, ಆ ದಿವ್ಯದೇಶಗಳು ಯಾವುವು ಮತ್ತು ಅಲ್ಲಿಯ ದಿವ್ಯದಂಪತಿಗಳ ಪರಿಚಯ ಮಾಡಿಕೊಂಡು ಅವರನ್ನು ನಿತ್ಯವೂ ಸ್ಮರಿಸಿ, ಕೊಂಡಾಡಿ ಧನ್ಯರಾಗಲು ಪ್ರಯತ್ನ ಪಡುವುದು ಅತ್ಯಾವಶ್ಯಕ.

ನಾವೆಲ್ಲರೂ ಕೂಡ ೧೦೮ ದಿವ್ಯದೇಶಗಳ ದಿವ್ಯದಂಪತಿಗಳನ್ನು ಸ್ಮರಿಸಿ ನಿತ್ಯಾನುಸಂಧಾನ ಮಾಡಿ ಕೃತಾರ್ಥರಾಗೋಣ.

ಹೊಗಳಿದಣಿಯವು ವೇದತತಿ ಕೈ ಮುಗಿದು ದಣಿಯರು ಕಮಲಭವ ಭವ  
ರೊಗುಮಿಗೆಯ ಮಾನಸ ಸಮಾಧಿಯ ಸಾರ ಸತ್ವದಲಿ  
ಬಗೆದು ದಣಿಯರು ಯೋಗಿಗಳು ಕೈ ಮುಗುಚಿ ದಣಿಯರು ಕರ್ಮಿಗಳು ಮೂ  
ಜಗದ ದೈವದ ದೈವ ಕೃಷ್ಣನ ದೈವನಾರೆಂದ

-ಕುಮಾರವ್ಯಾಸಭಾರತ.

# ನೂರೆಂಟು ದಿವ್ಯದಂಪತಿಗಳು

| | ದಿವ್ಯದೇಶ | | ದಿವ್ಯ ದಂಪತಿಗಳು |
|---|---|---|---|
| 1. | ಶ್ರೀರಂಗಂ | : | ಶ್ರೀರಂಗನಾಥರ್ - ಶ್ರೀರಂಗನಾಯಕಿ |
| 2. | ಉರೈಯೂರ್ | : | ಅಳಹಿಯಮಣವಾಳರ್ - ವಾಸಲಕ್ಷ್ಮಿ |
| 3. | ತಂಜೈ ಮಾಮಣಿಕ್ಕೋಯಿಲ್ | : | ನೀಲಮೇಘಸ್ವಾಮಿ - ಶೆಂಕಮಲವಲ್ಲಿ |
| 4. | ಅನ್ಬಿಲ್ | : | ತಿರುವಡಿವಳಹಿಯ ನಂಬಿ - ಅಳಹಿಯ ವಲ್ಲಿ |
| 5. | ಉತ್ತಮರ್ ಸನ್ನಿಧಿ | : | ಪುರುಷೋತ್ತಮರ್ - ಪೂರ್ವಾದೇವಿ |
| 6. | ತಿರುವೆಳ್ಳರೈ | : | ಪುಂಡರೀಕಾಕ್ಷರ್ - ಪಂಕಜವಲ್ಲಿ |
| 7. | ತಿರುಪ್ಪಳ್ಳಂ ಪೂದಂ ಕಾಡಿ | : | ಶ್ರೀ ಕೋಲವಲ್ವಿಲ್ಲಿ ರಾಮಸ್ವಾಮಿ - ಪೊತ್ತಾಮರೈವಾಳ್ |
| 8. | ತಿರುಪ್ಪೇರ್ ನಹರ್ | : | ಅಪ್ಪಕ್ಕುಡತ್ತಾನ್‌ಸ್ವಾಮಿ - ಕಮಲವಲ್ಲಿ |
| 9. | ತಿರುವಾದನೂರ್ | : | ಆಂಡಳಕ್ಕುಮ್ಮೈಯನ್ - ಶ್ರೀರಂಗನಾಯಕಿ |
| 10. | ತಿರುವಳುಂದೂರ್ | : | ಆಮರುವಿಯಪ್ಪನ್ - ಶೆಂಕಮಲವಲ್ಲಿ |
| 11. | ಶಿರುಪುಲಿಯೂರ್ | : | ಅರುಮಾಕಡಲ್ ಅಮುದುಸ್ವಾಮಿ - ತಿರುಮಾಮಹಳ್ |
| 12. | ತಿರುಚ್ಚೇರೈ | : | ಸಾರನಾಥರ್ - ಸಾರನಾಯಕಿ |
| 13. | ತಿರುತ್ತಲೈಚ್ಚಂಗ ನಾಣ್ಮದಿಯಂ | : | ನಾಣ್ಮದಿಯಂ ಸ್ವಾಮಿ - ತಲೈಚ್ಚಂಗನಾಚ್ಚಿಯಾರ್ |
| 14. | ತಿರುಕ್ಕುಡಂದೈ (ಕುಂಭಕೋಣಂ) | : | ಶಾರ್ಙ್ಗಪಾಣಿ - ಕೋಮಲವಲ್ಲಿ |
| 15. | ತಿರುಕ್ಕಂಡಿಯೂರ್ | : | ಹರಶಾಪವಿಮೋಚನರ್ - ಕಮಲವಲ್ಲಿ |
| 16. | ತಿರುವಿಣ್ಣಹರ್ | : | ಒಪ್ಪಿಲಿಯಪ್ಪನ್‌ಸ್ವಾಮಿ - ಭೂದೇವಿ |
| 17. | ತಿರುಕ್ಕಣ್ಣಪುರಂ | : | ಶೌರಿರಾಜನ್ - ಕಣ್ಣಪುರನಾಯಕಿ |
| 18. | ತಿರುವಾಲಿ ತಿರುನಗರಿ | : | ವಯಲಾಲಿ ಮಣವಾಳಸ್ವಾಮಿ - ಅಮೃತಘಟವಲ್ಲಿ |
| 19. | ತಿರುನಾಗೈ (ನಾಗಪಟ್ಟಣಂ) | | ಸೌಂದರ್ಯರಾಜರ್ - ಸೌಂದರ್ಯವಲ್ಲಿ |
| 20. | ತಿರುನರೈಯೂರ್ | : | ನಂಬಿಸ್ವಾಮಿ - ನಂಬಿಕ್ಕೈನಾಚ್ಚಿಯಾರ್ |
| 21. | ತಿರುನಂದಿಪುರ (ವಿಣ್ಣಹರಂ) | | ನಂದಿಪುರವಿಣ್ಣಹರ್ - ಚಂಪಕವಲ್ಲಿ |
| 22. | ತಿರುವಿಂದಳೂರ್ | : | ಸುಗಂಧವನ - ಪರಿಮಳರಂಗನಾಥರ್ ಚಂದ್ರಶಾಪ - ವಿಮೋಚನವಲ್ಲಿ |
| 23. | ತಿಲ್ಲೈತ್ತಿರುಚ್ಚಿತ್ತಿರ ಕೂಟಂ (ಚಿದಂಬರಂ) | : | ಗೋವಿಂದರಾಜರ್ - ಪುಂಡರೀಕವಲ್ಲಿ |
| 24. | ಕಾಳಿಚ್ಚೇರಾಮವಿಣ್ಣಹರಂ: (ಶ್ರೀರ್‌ಕಾಳಿ) | | ಕಾಡಾಳನ್‌ಸ್ವಾಮಿ - ಮಟ್ಟವಿಳುಂಕುಳಲಿ |
| 25. | ಕೂಡಲೂರ್ | : | ವೈಯ್ಯಂಕಾತ್ತಸ್ವಾಮಿ - ಪದ್ಮಾಸನವಲ್ಲಿ |
| 26. | ತಿರುಕ್ಕಣ್ಣಂಕುಡಿ | : | ಶ್ಯಾಮಲಮೇನಿಸ್ವಾಮಿ - ಅರವಿಂದವಲ್ಲಿ |
| 27. | ತಿರುಕ್ಕಣ್ಣಮಂಗೈ | : | ಶ್ರೀ ಪತ್ತರಾವಿಸ್ವಾಮಿ - ಅಭಿಷೇಕವಲ್ಲಿ |
| 28. | ಕಪಿಸ್ಥಲಂ | : | ಗಜೇಂದ್ರವರದರ್ - ರಮಾಮಣಿವಲ್ಲಿ |
| 29. | ತಿರುವೆಳ್ಳಿಯಂಕುಡಿ | : | ಕೋಲವಿಲ್ಲಿರಾಮರ್ - ಮರಕತವಲ್ಲಿ |
| 30. | ತಿರುಮಣಿಮಾಡ ಕ್ಕೋಯಿಲ್ | : | ನಂದಾವಿಳಕ್ಕುಸ್ವಾಮಿ - ಪುಂಡರೀಕವಲ್ಲಿ |
| 31. | ವೈಕುಂಠ ವಿಣ್ಣಗರಂ | : | ವೈಕುಂಠನಾಥರ್ - ವೈಕುಂಠವಲ್ಲಿ |
| 32. | ಅರಿಮೇಯ ವಿಣ್ಣಹರಂ | : | ಕುಡಮಾಡುಕ್ಕೂತ್ತನ್‌ಸ್ವಾಮಿ - ಅಮೃತಘಟವಲ್ಲಿ |
| 33. | ತಿರುತ್ತೇವನಾರ್‌ತೊಹೈ | : | ದೈವನಾಯಕರ್ - ಕಡಲ್‌ಮಹಳ್‌ನಾಚ್ಚಿಯಾರ್ |
| 34. | ವಣ್‌ಪುರುಷೋತ್ತಮಂ | : | ಪುರುಷೋತ್ತಮರ್ - ಪುರುಷೋತ್ತಮನಾಯಕಿ |
| 35. | ತಿರುಚ್ಚೆಂಬೊನ್‌ಶೆಯ್ | : | ಪೇರರುಳ್ಳಾಸ್ವಾಮಿ - ಅಲ್ಲಿಮಾಮಲರ್‌ನಾಚ್ಚಿಯಾರ್ |
| 36. | ತಿರುತ್ತೆತ್ತಿಯಂಬಲಂ | : | ಶೆಂಗಣ್ಮಾಲ್‌ಸ್ವಾಮಿ - ಶೆಂಗಮಲವಲ್ಲಿ |
| 37. | ತಿರುಮಣಿಕ್ಕೂಡಂ | : | ಮಣಿಕ್ಕುಡನಾಯಕರ್ - ತಿರುಮಾಮಹಳನಾಚ್ಚಿಯಾರ್ |
| 38. | ತಿರುಕ್ಕಾವಳಂ ಪಾಡಿ | : | ಗೋಪಾಲಕೃಷ್ಣನ್ - ಮಡವರಲ್ ಮಂಗೈ |
| 39. | ತಿರುವೆಳ್ಳಕ್ಕುಳಂ (ಅಣ್ಣನ್ ಪೋಯಿಲ್) | : | ಕೃಷ್ಣನಾರಾಯಣರ್ - ಪೂವಾರ್‌ತಿರುಮಹಳ್‌ನಾಚ್ಚಿಯಾರ್ |
| 40. | ಪಾರ್ತ್‌ಪಳ್ಳಿ | : | ತಾಮರೈಯಾಳ್‌ಕೇಳ್ವ - ತಾಮರೈನಾಯಕಿ. |
| 41. | ತಿರುಮಾಲಿರಂ ಶೋಲೈ | : | ಸುಂದರರಾಜರ್ - ಸುಂದರವಲ್ಲಿ |
| 42. | ತಿರುಕ್ಕೋಟಿಮಟಿಯೂರ್ (ಗೋಷ್ಠೀಪುರಂ) | | ಸೌಮ್ಯನಾರಾಯಣರ್ - ತಿರುಮಾಮಹಳ್‌ನಾಯಕಿ |
| 43. | ತಿರುಮಯ್ಯಂ (ಸತ್ಯಗಿರಿ) | : | ಸತ್ಯಗಿರಿನಾಥರ್ - ಉಯ್ಯವಂದಾಳ್‌ನಾಚ್ಚಿಯಾರ್ |
| 44. | ತಿರುಪುಲ್ಲಾಣಿ (ದರ್ಭಶಯನಂ) | : | ಕಲ್ಯಾಣ ಜಗನ್ನಾಥರ್ - ಕಲ್ಯಾಣವಲ್ಲಿ |
| 45. | ತಿರುತ್ತಣ್‌ಗಾಲ್ | : | ಅರ್ಪ್ಪಸ್ವಾಮಿ - ಅನ್ನನಾಯಕಿ |
| 46. | ತಿರುಮೋಹೂರ್ (ಮೋಹನಪುರಿ) | : | ಕಾಳಮೇಘರ್ - ಮೇಘವಲ್ಲಿ |
| 47. | ತಿರುಕ್ಕುಡಲ್ (ತೆಮಧುರೈ) | : | ಕೂಡಲಳಹರ್‌ಸ್ವಾಮಿ - ಮಧುರವಲ್ಲಿ |

| | | |
|---|---|---|
| 48. | ಶ್ರೀವಿಲ್ಲಿಪುತ್ತೂರ್ | : ರಂಗಮನ್ನಾರ್ - ಶ್ರೀ ಗೋದಾದೇವಿ (ವಟಪತ್ರಶಾಯಿ) |
| 49. | ತಿರುಕ್ಕುರುಹೂರ್ | : ಆದಿನಾಥರ್ - ಆದಿನಾಥವಲ್ಲಿ |
| 50. | ತುಲೈವಿಲ್ಲಿ ಮಂಗಲಂ (ರಟ್ಟೈ ತಿರುಪತಿ) | : ದೇವಪಿರಾನ್ - ಕರುತ್ತಡಂ ಕಣ್ಣಿ |
| 51. | ಶಿರೀವರ ಮಂಗೈ (ವಾನಮಾಮಲೈ ತೋತಾದ್ರಿ) | : ತೋತಾದ್ರಿ ದೈವನಾಯಕರ್ - ಶ್ರೀವರಮಂಗೈ |
| 52. | ತಿರುಪ್ಪುಳಿಂಗುಡಿ | : ಕಾಯ್ ಶಿವವೇಂರ್ದಸ್ವಾಮಿ - ಮಲರ್‌ಮಹಳ್‌ನಾಚ್ಚಿಯಾರ್ |
| 53. | ತೆನ್ನಿರುಪ್ಪೇರ್ | : ಮಕರನೆಡುಂಕುಳೈಕ್ಕಾರ್ದ - ಕುಳೈಕ್ಕಾದವಲ್ಲಿ |
| 54. | ಶ್ರೀ ವೈಕುಂಠಂ | : ಕಳ್ಳಪ್ಪಿರಾರ್‌ಸ್ವಾಮಿ - ವೈಕುಂಠವಲ್ಲಿ |
| 55. | ತಿರುಕ್ಕೋಳೂರ್ | : ವೈತ್ತಮಾನಿಧಿಸ್ವಾಮಿ - ಕೋಳೂರ್‌ವಲ್ಲಿ |
| 56. | ವರಗುಣಮಂಗೈ (ನತ್ತಂ) | : ವಿಜಯಾಸನರ್ - ವರಗುಣವಲ್ಲಿ |
| 57. | ತಿರುಕ್ಕುಳಂದೈ (ಪೆರುಂ ಕುಳಂ) | : ಮಾಯಕ್ಕೂತ್ತರ್‌ಸ್ವಾಮಿ - ಕುಳಂದೈವಲ್ಲಿ |
| 58. | ತಿರುಕ್ಕುರುಂಗುಡಿ | : ವೈಷ್ಣವನಂಬಿಸ್ವಾಮಿ - ಕುರಂಗಾಡಿವಲ್ಲಿ |
| 59. | ತಿರುವನಂತಪುರಂ (ಅನಂತ ಶಯನಂ) | : ಅನಂತಪದ್ಮನಾಭರ್ - ಶ್ರೀಹರಿಲಕ್ಷ್ಮಿ |
| 60. | ತಿರುವಣ್ ಪರಿಶಾರಂ | : ತಿರುಕ್ಕುರಳಪ್ಪರ್‌ಸ್ವಾಮಿ - ಕಮಲವಲ್ಲಿ |
| 61. | ತಿರುಕ್ಕಾಟ್ಕರೈ | : ಕಾಟ್ಕರೈಯಪ್ಪರ್‌ಸ್ವಾಮಿ - ಪೆರುಂಶೆಲ್ವನಾಯಕಿ |
| 62. | ತಿರುಮೂಳಿಕ್ಕಳಂ | : ತಿರುಮೂಳಿಕ್ಕಳತ್ತಾರ್‌ಸ್ವಾಮಿ - ಮಧುರವೇಣಿ |
| 63. | ಕುಟ್ಟನಾಟ್ಟುತ್ತಿರು ಪ್ಪುಲಿಯೂರ್ | : ಮಾಯಪ್ಪಿರಾರ್‌ಸ್ವಾಮಿ - ಪೊರ್ಕೊಡಿ ನಾಚ್ಚಿಯಾರ್ |
| 64. | ತಿರುಚ್ಚೆಂಗುನ್ನೂರ್ (ತಿರುಚ್ಚಿತ್ತಾರು) | : ಇಮೈಯವರಪ್ಪರ್ - ಶೆಂಕಮಲವಲ್ಲಿ |
| 65. | ತಿರುನಾವಾಯ್ | : ನಾರಾಯಣರ್ - ಮಲರ್ ಮಂಗೈನಾಚ್ಚಿಯಾರ್ |
| 66. | ತಿರುವಲ್ಲವಾಳ್ | : ಕೋಲಪ್ಪಿರಾರ್‌ಸ್ವಾಮಿ - ಶೆಲ್ವತಿರುಕ್ಕೊಳುಂ ನಾಚ್ಚಿಯಾರ್ |
| 67. | ತಿರುವಣ್‌ವಂಡೂರ್ | : ಪಾಂಬಣೈಯಪ್ಪರ್ - ಕಮಲವಲ್ಲಿ |
| 68. | ತಿರುವಾಟ್ಟಾರು | : ಆದಿಕೇಶವರ್ -ಮರಕತವಲ್ಲಿ |
| 69. | ವಿತ್ತುವಕ್ಕೋಡು | : ಉಯ್ಯವಂದಸ್ವಾಮಿ - ವಿತ್ತುವಕ್ಕೋಟ್ಟುವಲ್ಲಿ |
| 70. | ತಿರುಕ್ಕಡಿತ್ತಾನ ನಹರಂ | : ಅದ್ಭುತ ನಾರಾಯಣರ್ - ಕಲ್ಪಕವಲ್ಲಿ |
| 71. | ತಿರುವಾರ್ರ ವಿಳೈ | : ತಿರುಕ್ಕುರಳಪ್ಪರ್ — ಪದ್ಮಾಸನ ನಾಚ್ಚಿಯಾರ್ |
| 72. | ತಿರುವಹೀಂದ್ರಪುರಂ | : ದೈವನಾಯಕರ್ - ವೈಕುಂಠನಾಯಕಿ |
| 73. | ತಿರುಕ್ಕೋವಲೂರ್ (ಗೋಪಾಲಪುರಂ) | : ತ್ರಿವಿಕ್ರಮರ್ - ಪೂಂಕೋವಲ್ ನಾಚ್ಚಿಯಾರ್ |
| 74. | ಶ್ರೀಕಾಂಚೀಪುರಂ | : ಪೇರರುಳಾಳರ - ಪೆರುಂದೇವಿ (ಅಳುಹಿಯಶಿಂಗರ್ ಹರಿದ್ರಾದೇವಿ) |
| 75. | ಅಷ್ಟಭುಜಂ (ಅಟ್ಟಪುಯಕರಂ) | : ಆದಿಕೇಶವರ್ - ಅಲಮೇಲ್ ಮಂಗೈ |
| 76. | ತಿರುತ್ತಣ್‌ಕಾ (ದೀಪಪ್ರಕಾಶಂ) | : ದೀಪಪ್ರಕಾಶರ್ - ಮರಕತವಲ್ಲಿ |
| 77. | ವೇಳುಕ್ಕೈ | : ಮುಕುಂದನಾಯಕರ್ - ವೇಳುಕ್ಕೈವಲ್ಲಿ |
| 78. | ಪಾಡಹಂ (ಪಾಂಡವದೂರ್ತ ಸನ್ನಿಧಿ) | : ಪಾಂಡವದೂರ್ತ - ರುಕ್ಮಿಣೀ ಸತ್ಯಭಾಮ |
| 79. | ನೀರಹಂ | : ಜಗದೀಶರ್ - ನಿಲಮಂಗೈವಲ್ಲಿ |
| 80. | ನಿಲಾತ್ತಿಂಗಳ್ ತುಂಡಂ | : ನಿಲಾತ್ತಿಂಗಳ್‌ತುಂಡತ್ತಾರ್ - ನೇರೊರುವರಿಲ್ಲಾವಲ್ಲಿ |
| 81. | ಊರಹಂ (ತ್ರಿವಿಕ್ರಮ) | : ಉಲಹಳಂದಸ್ವಾಮಿ - ಅಮುದವಲ್ಲಿ |
| 82. | ತಿರುವೇಕಾ (ಯಥೋಕ್ತಕಾರಿ ಸನ್ನಿಧಿ | : ಶೊನ್ನವಣ್ಣಂಶೆಯ್ದಸ್ವಾಮಿ - ಕೋಮಲವಲ್ಲಿ |
| 83. | ಕಾರಹಂ | : ಕರುಣಾಕರರ - ಪದ್ಮಾಮಣಿ ನಾಚ್ಚಿಯಾರ್ |
| 84. | ಕಾರ್ವಾನಂ | : ನವನೀತಚೋರರ - ಕಮಲವಲ್ಲಿ |
| 85. | ತಿರುಕ್ಕಳ್ವನೂರ್ | : ಆದಿವರಾಹರ್ - ಅಂಶಿಲೈವಲ್ಲಿ |
| 86. | ಪವಳವಣ್ಣರ್ | : ಪವಳವಣ್ಣಸ್ವಾಮಿ - ಪವಳವಲ್ಲಿ |
| 87. | ಪರಮೇಶ್ವರ ವಿಣ್ಣಹರಂ | : ಪರಮಪದನಾಥರ್ - ವೈಕುಂಠನಾಚ್ಚಿಯಾರ್ |
| 88. | ತಿರುಪ್ಪುಳ್‌ಕುಳಿ | : ವಿಜಯರಾಘವರ್ - ಮರಕತವಲ್ಲಿ |
| 89. | ತಿರುವಿನ್ನವ್ವೂರ್ | : ಭಕ್ತವತ್ಸಲರ - ಎನ್ನೈಪ್ಪೆತ್ತತ್ತಾಯಾರ್ |
| 90. | ತಿರುವೆವ್ವುಳ್ | : ವೀರರಾಘವರ್ - ಕನಕವಲ್ಲಿ (ತಿರುವಳ್ಳೂರ್) |
| 91. | ತಿರುನೀರ್‌ಮಲೈ | : ನೀರ್‌ವರ್ಣ - ಮಂಗೈ |
| 92. | ತಿರುವಿಡವೆಂದೈ | : ನಿತ್ಯಕಲ್ಯಾಣರ್ - ಕೋಮಲವಲ್ಲಿ |
| 93. | ತಿರುಕ್ಕಡಲ್‌ಮಲ್ಲೈ (ಮಹಾಬಲಿಪುರಂ) | : ಶಯನತ್ತುರೈವಾರ್ - ನಿಲಮಂಗೈ |
| 94. | ತಿರುವಲ್ಲಿಕ್ಕೇಣಿ (ಬೃಂದಾರಣ್ಯಕ್ಷೇತ್ರ) | : ವೆಂಕಟಕೃಷ್ಣ - ರುಕ್ಮಿಣೀದೇವಿ |
| 95. | ತಿರುಕ್ಕಡಿಹೈ (ಘಟಿಕಾಚಲಂ) | : ಯೋಗನೃಸಿಂಹರ್ - ಅಮೃತವಲ್ಲಿ |
| 96. | ತಿರುವೇಂಗಡಂ (ತಿರುಮಲೈ) | : ತಿರುವೇಂಗಡಮುಡೈಯಾನ್ - ಅಲರ್‌ಮೇಲ್ ಮಂಗತ್ತಾಯಾರ್ |
| 97. | ಶಿಂಗವೇಳ್ ಕುನ್ರಂ | : ನರಸಿಂಹರ್ - ಲಕ್ಷ್ಮೀನಾಚ್ಚಿಯಾರ್ |
| 98. | ತಿರುವಯೋಧ್ಯೈ | : ರಘುನಾಥರ್ - ಸೀತಾದೇವಿ |
| 99. | ನೈಮಿಶಾರಣ್ಯಂ | : ದೇವರಾಜರ್ - ಶ್ರೀಹರಿಲಕ್ಷ್ಮಿ |
| 100. | ಸಾಳಗ್ರಾಮಂ | : ಶ್ರೀಮೂರ್ತ - ಶ್ರೀದೇವಿ |
| 101. | ಬದರಿಕಾಶ್ರಮಂ | : ಬದರೀನಾರಾಯಣರ್ - ಅರವಿಂದವಲ್ಲಿ |
| 102. | ತಿರಪ್ಪಿರಿತಿ (ಪ್ರೀತಿನಗರಂ) | : ನೀಲಮೇಘರ - ಪುಂಡರೀಕವಲ್ಲಿ |
| 103. | ತುವರೈ (ದ್ವಾರಕ) | : ಪರಮಪುರುಷ - ಪರಿಮಳವಲ್ಲಿ |
| 104. | ವಡಮಧುರೈ (ಬೃಂದಾ: ವನಂ) | : ಕಲ್ಯಾಣ ನಾರಾಯಣರ್ - ಕಲ್ಯಾಣ ನಾಚ್ಚಿಯಾರ್ |
| 105. | ತಿರುವಾಯ್ಪಾಡಿ (ಗೋಕುಲಂ) | : ಗೋವರ್ಧನೇಶರ್ - ರುಕ್ಮಿಣೀ ಸತ್ಯಭಾಮ |
| 106. | ತಿರುಕ್ಕಂಡಂ ವಿನ್ರುಂ ಕಡಿನಹರ್ (ದೇವಪ್ರಯಾಗಂ) | : ನವಮೋಹನಕೃಷ್ಣ - ರುಕ್ಮಿಣೀ ಸತ್ಯಭಾಮ |
| 107. | ತಿರುಪ್ಪಾರ್ಕಡಲ್ (ಕ್ಷೀರಾಬ್ಧಿ) | : ಕ್ಷೀರಾಬ್ಧಿನಾಥರ್ - ಕಡಲ್‌ಮಹಳ್ |
| 108. | ತಿರುನಾರಾಯಣಪುರಂ (ಮೇಲ್‌ಕೋಟೈ) (ಇದು ಅಭಿಮಾನಸ್ಥಳ) | : ಶೆಲ್ವನಾರಾಯಣರ್ - ಯದುಗಿರಿನಾಯಕಿ |

# ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆ

ಭೂಮಿಯ ಒಂದು ವಿಶಿಷ್ಟ ಗುಣ ಇಲ್ಲಿನ ಹಸಿರು. ಗಿಡವಾಗಿ, ಮರವಾಗಿ, ವನವಾಗಿ, ಕಾಡಾಗಿ ಮನುಷ್ಯನ ಜೊತೆಗೇ ಬೆಳೆದು ಭೂಮಿಯ ಮೇಲಿನ ಮನುಷ್ಯನ ಇರವನ್ನು ಅರ್ಥಪೂರ್ಣ ಆಗಿಸಿರುವುದು ಹಸಿರು. ತಿರುಮಲೆಯ ಕಾಡುಗಳು ಶ್ರೀ ವೆಂಕಟೇಶ್ವರಸ್ವಾಮಿಯ ಸೇವೆಯಲ್ಲಿ ಪರಂಪರೆಯಿಂದ ನೀರುನೆರಳಿನ ತಾಣವಾಗಿ ಪ್ರಸಿದ್ಧಿ ಪಡೆದದ್ದು ಉಂಟು. ಅಂತಹ ಹಿರಿಮೆಯ ಪರಿಸರವನ್ನು ರಕ್ಷಿಸಲು 1981 ರಲ್ಲಿ 25 ಲಕ್ಷ ವೃಕ್ಷಗಳನ್ನು ಬೆಳೆಸುವ ವನಸಂರಕ್ಷಣೆಯ ಕಾರ್ಯಕ್ರಮವನ್ನು ಕೈಗೆತ್ತಿಕೊಳ್ಳಲಾಯಿತು. ಅದರ ಯಶಸ್ವಿ ಅನುಷ್ಠಾನದಿಂದ ಸ್ಫೂರ್ತವಾಗಿ ಹಲವಾರು ವನಾಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಸಾರ್ವಜನಿಕರನ್ನೂ ಈ ಪರಿಸರ ಪರಿರಕ್ಷಣೆಯ ಪವಿತ್ರಕಾರ್ಯದಲ್ಲಿ ಪಾಲುಗೊಳ್ಳಲು ಯೋಜನೆಗಳನ್ನು ರೂಪಿಸಲಾಗಿದೆ. ಅವುಗಳಲ್ಲಿ ಹಲವು ಈ ರೀತಿ ಇವೆ.

## ವೃಕ್ಷ ಸಂವರ್ಧನ ಯೋಜನೆ :

ಒಂದು ಎಕರೆ ಸ್ಥಳದಲ್ಲ ರೂ. 15,000 ರೂಪಾಯಿ ನೀಡಿದವರ ಹೆಸರಿನಲ್ಲಿ ಉಪವನವನ್ನು ಬೆಳೆಸಲಾಗುವುದು. ದಾನಿಗಳಿಗೆ ಹತ್ತು ವರ್ಷಗಳಕಾಲ ಪ್ರತಿವರ್ಷದಲ್ಲಿ ಎರಡು ದಿನ ತಿರುಮಲೆಯಲ್ಲಿ ಉಚಿತ ವಸತಿ ನೀಡಿ ಅವರಿಗೆ ಈ ಕಾಲದಲ್ಲಿ 5 ಮಂದಿಗೆ ವಿಶೇಷ ಪ್ರವೇಶದ ದರ್ಶನಾವಕಾಶ ನೀಡಲಾಗುವುದು.

## ವೃಕ್ಷ ಪ್ರಸಾದ :

ಪ್ರತಿವರ್ಷವೂ ನೂರು ಹೂ ಹಣ್ಣು ಬಿಡುವ ಸಸಿಗಳನ್ನು ಬೆಳೆಸುವ ಈ ಯೋಜನೆಯಲ್ಲಿ ದಾನಿಗಳ ಹೆಸರಿನಲ್ಲಿ ಪ್ರತಿವರ್ಷವೂ ನೂರು ಗಿಡಗಳನ್ನು ವಿತರಣೆ ಮಾಡಲಾಗುವುದು ಹತ್ತು ಸಾವಿರ ರೂಪಾಯಿಗಳ ದಾನದಿಂದ ಈ ಯೋಜನೆಯಲ್ಲಿ ಪಾಲುಗೊಳ್ಳುವ ದಾನಿಗಳಿಗೆ ಪ್ರತಿವರ್ಷವೂ ಎರಡುದಿನ ತಿರುಮಲೆಯಲ್ಲಿ ಉಚಿತ ವಸತಿ 5 ಮಂದಿಗೆ ವಿಶೇಷ ಪ್ರವೇಶದ ದರ್ಶನಾವಕಾಶ ನೀಡಲಾಗುವುದು.

## ಸ್ಮಾರಕ ವನ :

ಒಂದೆಡೆ ಹತ್ತು ಮರಗಳನ್ನು 5 ವರ್ಷ ನೋಡಿಕೊಳ್ಳುವ ಈ ಯೋಜನೆಯಲ್ಲಿ 2000 ರೂ. ಗಳನ್ನು ನೀಡುವ ದಾನಿಗಳ ಹೆಸರನ್ನೆ ಈ ತರುಸಮೂಹಕ್ಕೆ ನೀಡಲಾಗುವುದು ಐದು ವರ್ಷಗಳ ಕಾಲ ವರ್ಷಕ್ಕೆ ಒಮ್ಮೆ 5 ಮಂದಿಗೆ ವಿಶೇಷ ಪ್ರವೇಶದ ದರ್ಶನಾವಕಾಶ ನೀಡಲಾಗುವುದು.

## ವನಸಂರಕ್ಷಣ ಭಾಗಸ್ವಾಮ್ಯ :

ಏಳು ಬೆಟ್ಟಗಳ ವನಾಚ್ಛಾದನೆಯನ್ನು ಸಂರಕ್ಷಿಸುವ ಉದ್ದೇಶದ ಈ ಯೋಜನೆಯಲ್ಲಿ 1000 ರೂ.ಗಳ ದಾನದಿಂದ ಪಾಲುಗೊಳ್ಳಬಹುದು. ದಾನಿಗಳ ಹೆಸರನ್ನು ಮುಖ್ಯವಾಗಿ ಪ್ರದರ್ಶಿಸಲಾಗುವುದು. ಅವರ ಐದು ಮಂದಿಗೆ ಒಂದು ವರ್ಷ ವಿಶೇಷ ಪ್ರವೇಶದಲ್ಲಿ ದರ್ಶನಾವಕಾಶ ನೀಡಲಾಗುವುದು.

## ಅಧ್ಯಯನ ವನಗಳು :

ಸಸ್ಯವನದಲ್ಲಿ ಒಂದು ಬಗೆಯ ಸಸ್ಯದ ವಿಶೇಷ ಆರೈಕೆ ಮಾಡಲಾಗುವುದು. ಸಸ್ಯದ ಬಳಿ ದಾನಿಯ ಹೆಸರಿನ ಪಲಕ ವಿಡಲಾಗುವುದೆ ಇದಕ್ಕೆ ದಾನ ನೀಡಬೇಕಾದ ಮೊತ್ತ ರೂ. 500/–

## ವೃಕ್ಷ ದತ್ತತೆ :

ತಿರುಮಲೆಯ ಹಾದಿಯಲ್ಲೂ ಬೀದಿ ಬದಿಗಳಲ್ಲೂ ವೃಕ್ಷಗಳನ್ನು ಬೆಳೆಸುವ ಈ ಯೋಜನೆಯಲ್ಲಿ 250 ರೂ. ನೀಡಿದವರ ಹೆಸರನ್ನು ಮರದ ಬಳಿ ಫಲಕದಲ್ಲಿ ಪ್ರದರ್ಶಿಸಲಾಗುವುದು.

ತಿರುಮಲೆಯ ಅರಣ್ಯವು ನಮ್ಮ ಪರಂಪರೆಯ ಕೊಡುಗೆಯಾಗಿದ್ದು ಅದನ್ನು ರಕ್ಷಿಸಿ ಮುಂದಿನ ಪೀಳಿಗೆಗೆ ತಲುಪಿಸುವ.

ದಶಕೂಪ ಸಮೋವಾಪಿ ದಶವಾಪಿ ಸಮೋ ಹ್ರದ
ದಶ ಹ್ರದ ಸಮಃ ಪುತ್ರ ದಶಪುತ್ರ ಸಮೋ ದ್ರುಮ

ಹತ್ತು ಬಾವಿಗಳು ಒಂದು ಕೆರೆಗೂ ಹತ್ತು ಕೆರೆಗಳು ಒಂದು ಸರೋವರಕ್ಕೂ ಹತ್ತು ಸರೋವರಗಳು ಒಬ್ಬ ಮಗನಿಗೂ ಹತ್ತು ಗಂಡುಮಕ್ಕಳು ಒಂದು ತರುವಿಗೂ ಸಮ.

ದಯವಿಟ್ಟು ಈ ಉದಾತ್ತ ಯೋಜನೆಗಳಲ್ಲಿ ಭಾಗಿಗಳಾಗಬೇಕೆಂದು ಭಕ್ತ ಬಂಧುಗಳಲ್ಲಿ ವಿನಂತಿಸಲಾಗಿದೆ.

ತಮ್ಮ ದಾನಗಳನ್ನು ಕಳುಹಿಸಬೇಕಾದ ವಿಳಾಸ :

**ಕಾರ್ಯನಿರ್ವಹಣಾಧಿಕಾರಿ,**

ತಿ. ತಿ. ದೇವಸ್ಥಾನಗಳು,

ತಿರುಪತಿ -- 517 507.

# ಕನ್ನಡ ಜೈಮಿನಿ ಭಾರತ

---ವಿದ್ವಾನ್ 'ರಘುಸುತ'.

ಸಂಸ್ಕೃತದಲ್ಲಿ ವ್ಯಾಸ ವಿರಚಿತ ಮಹಾಭಾರತವಲ್ಲದೆ, ಬೇರೆ ಭಾರತಗಳು ಇರುವಂತೆ, ಕನ್ನಡದಲ್ಲಿಯೂ ಅನೇಕ ಭಾರತಗಳಿವೆ. ಪಂಪ ಭಾರತ, ಕುಮಾರವ್ಯಾಸ ಭಾರತಗಳಷ್ಟೇ ಪ್ರಖ್ಯಾತವಾದುದೂ ಜನಪ್ರಿಯವಾದುದೂ ಆದ ಒಂದು ಭಾರತವಿದೆ. ಅದೇ ಲಕ್ಷ್ಮೀಶ ಮಹಾಕವಿ ವಿರಚಿತ 'ಕರ್ನಾಟಕ ಜೈಮಿನಿ ಭಾರತ'.

ಮಹಾಭಾರತದ ಯುದ್ಧಾನಂತರ, ಪಾಂಡವರು ಸ್ವರ್ಗಾರೋಹಣ ಮಾಡಿದ ನಂತರ ಅಭಿಮನ್ಯುವಿಗೆ ಉತ್ತರೆಯಲ್ಲಿ ಜನಿಸಿದ ಪರೀಕ್ಷಿತನು ರಾಜನಾದನು. ಇವನು ಒಮ್ಮೆ ಬೇಟೆಯಾಡಲು ಹೋಗಿದ್ದಾಗ, ಬಹಳ ಸಮಯದವರೆಗೆ ಸುತ್ತಾಡಿದರೂ ಬೇಟೆಗೆ ಮೃಗಗಳು ಸಿಗದೆ, ತನ್ನ ಪರಿವಾರದವರಿಂದ ದೂರವಾಗಿ, ಒಂಟಿಯಾದನು. ಬಹಳ ಬಾಯಾರಿಕೆಯಾದುದರಿಂದ, ಒಂದೆಡೆ ತಪಸ್ಸು ಮಾಡುತ್ತಿದ್ದ ಶಮೀಕ ಋಷಿಯ ಆಶ್ರಮದ ಬಳಿಗೆ ಬಂದು, ಕುಡಿಯಲು ನೀರು ಕೊಡೆಂದು ಗಟ್ಟಿಯಾಗಿ ಕೂಗಿಕೊಂಡನು. ಋಷಿಯು ಅಂತರ್ಮುಖನಾಗಿ ತಪಸ್ಸಿನಲ್ಲಿ ತಲ್ಲೀನನಾಗಿದ್ದುದರಿಂದ ಪರೀಕ್ಷಿತನಿಗೆ ಉತ್ತರ ನೀಡಲಿಲ್ಲ. ಇದರಿಂದ ಕೋಪಗೊಂಡ ಪರೀಕ್ಷಿತನು ಋಷಿಗೆ ತಕ್ಕ ಶಾಸ್ತಿ ಮಾಡಬೇಕೆಂದು ಹತ್ತಿರದಲ್ಲಿ ಸತ್ತು ಬಿದ್ದಿದ್ದ ಹಾವೊಂದನ್ನು ತೆಗೆದು, ಅವನ ಕೊರಳಿಗೆ ಹಾಕಿ, ತಾನು ಹೊರಟು ಹೋದನು.

ಸ್ವಲ್ಪ ಸಮಯದ ನಂತರ ಶಮೀಕ ಋಷಿಯ ಮಗನಾದ ಶೃಂಗಿಯು ಫಲಗಳನ್ನು ಆರಿಸಿ ತರಲು ಹೋಗಿದ್ದವನು ಹಿಂತಿರುಗಿ ಬಂದ. ತಂದೆಯ ಕೊರಳಿನಲ್ಲಿನ ಸತ್ತ ಹಾವನ್ನು ನೋಡಿ, ಕೋಪಗೊಂಡು, "ಈ ಹಾವನ್ನು ಹಾಕಿದವನು ಇನ್ನು ಏಳು ದಿನಗಳಲ್ಲಿ ಸಾಯಲಿ!" ಎಂದು ಶಪಿಸಿದನು.

ಇದು ಪರೀಕ್ಷಿತ್ತನಿಗೆ ಗೊತ್ತಾಯಿತು. ಶಾಪದಿಂದ ವಿಮೋಚನೆ ಸಾಧ್ಯವಿಲ್ಲದಿದ್ದರೂ ತನ್ನನ್ನು ರಕ್ಷಿಸಿಕೊಳ್ಳಲು ಅವನು ತುಂಬಾ ಪ್ರಯತ್ನಗಳನ್ನು ಮಾಡಿದನು. ಇದು ಯಾವುದೂ ಸಫಲವಾಗಲಿಲ್ಲ. ಏಳನೇ ದಿನ ಋಷಿಗಳು ತಂದಿಟ್ಟ ಫಲವನ್ನು ತಿನ್ನಬೇಕೆಂದು ಪ್ರಯತ್ನ ಪಟ್ಟಾಗ, ಅದರಲ್ಲಿ ಅಣುರೂಪದಲ್ಲಿ ತಕ್ಷಕನು ಪರೀಕ್ಷಿತನ ಮೂಗನ್ನು ಕಚ್ಚಿದನು. ಪರಿಣಾಮವಾಗಿ ಪರೀಕ್ಷಿತನು ಮೃತಪಟ್ಟನು.

ಇವನ ಮಗನಾದ ಜನಮೇಜಯನು ನಂತರ ರಾಜನಾಗಿ, ತನ್ನ ತಂದೆಯ ಸಾವಿಗೆ ಕಾರಣವಾದ ಸರ್ಪಗಳೇ ಭೂಮಿಯ ಮೇಲೆ ಇರಬಾರದೆಂದು ತೀರ್ಮಾನಿಸಿ, ಸರ್ಪಯಾಗವನ್ನು ಪ್ರಾರಂಭಿಸಿದನು. ಸರ್ಪಗಳೆಲ್ಲ ಅಗ್ನಿಕುಂಡದಲ್ಲಿ ಆಹುತಿಯಾದುವು. ತಕ್ಷಕನೂ ಆಹುತಿಯಾಗಬೇಕಾಗಿತ್ತು. ಅವನೊಂದಿಗೆ ಇಂದ್ರನೂ ಕೂಡ. ಕಡೆಗೆ ತ್ರಿಮೂರ್ತಿಗಳ ಮಧ್ಯೆ ಪ್ರವೇಶದಿಂದ ಯಾಗ ನಿಂತಿತು.

ಆದರೆ ಸರ್ಪಯಾಗ ಮಾಡಿದುದರಿಂದ ಜನಮೇಜಯನಿಗೆ ತೊನ್ನುರೋಗ ಬಂದಿತು. ಅದಕ್ಕೆ ಪರಿಹಾರಾರ್ಥವಾಗಿ ಪಾಂಡವರ ಚರಿತ್ರೆಯನ್ನು ಆಲಿಸಿದರೆ, ಸಂಪೂರ್ಣವಾಗಿ ಆ ಪಾಪ ಪರಿಹಾರವಾಗುತ್ತದೆಯೆಂದು ವೇದವ್ಯಾಸರು ತಿಳಿಸಿ, ಆ ಕಾರ್ಯವನ್ನು ನೆರವೆ ರಿಸಲು ತಮ್ಮ ಶಿಷ್ಯ ವೈಶಂಪಾಯನನಿಗೆ ಸೂಚಿಸಿದರು. ವೈಶಂಪಾಯನನು ಕಥೆಯನ್ನು ಹೇಳಿದನು. ವ್ಯಾಸಭಾರತ ಹೀಗೆ ಸೃಷ್ಟಿಯಾಯಿತು.

ಜನಮೇಜಯನ ತೊನ್ನು ರೋಗವೆಲ್ಲ ವಾಸಿಯಾದರೂ, ಮೂಗಿನ ತುದಿಯಲ್ಲಿ ಸ್ವಲ್ಪ ತೊನ್ನು ಉಳಿದುಕೊಂಡಿತು. ಇದರಿಂದ ಮತ್ತೆ ದುಃಖಗೊಂಡ ಜನಮೇಜಯನು ವೇದವ್ಯಾಸರನ್ನು ಸ್ಮರಿಸಲು, ಅವರು ಪ್ರತ್ಯಕ್ಷರಾಗಿ,

"ಮಹಾಭಾರತದ ಶ್ರವಣದ ಕಾಲದಲ್ಲಿ ನಿನ್ನಲ್ಲಿ ಕೆಲವು ಅನುಮಾನಗಳು ಉದಯಿಸಿದುವು. ಆ ಅನುಮಾನಗಳನ್ನು ತಿಳಿಸಿ, ಚರ್ಚಿಸಿ, ಪರಿಹರಿಸಿಕೊಳ್ಳದಿದ್ದ ಕಾರಣ, ಸಂದೇಹಗಳು ನಿನ್ನಲ್ಲಿ ಹಾಗೆಯೇ ಉಳಿದಿದ್ದರಿಂದ, ನಿನ್ನ ಮೂಗಿನ ಮೇಲೆ ತೊನ್ನು ಹಾಗೆಯೇ ಉಳಿಯಿತು. ಅದರಿಂದ ಜೈಮಿನಿ ಮಹರ್ಷಿಯ ಮುಖದಿಂದ ಅದೇ ಕಥೆಯನ್ನು ಹೇಳಿಸಿ, ಕೇಳಿದರೆ ನಿನ್ನ ರೋಗವು ಸಂಪೂರ್ಣವಾಗಿ ಗುಣವಾಗುವುದು."

ಎಂದು ಹೇಳಿ, ಜೈಮಿನಿ ಋಷಿಯನ್ನು ಕರೆಯಿಸಿ, ಮಹಾಭಾರತದ ಕಥೆಯನ್ನು ಜನಮೇಜಯನಿಗೆ ವಿಸ್ತಾರವಾಗಿ ತಿಳಿಸುವಂತೆ ಹೇಳಿ, ಬದರಿಕಾಶ್ರಮಕ್ಕೆ ಹೊರಟು ಹೋದರು.

ಅಂತೆಯೇ ಜೈಮಿನಿ ಮಹರ್ಷಿಯು ಬೇರೆಯೇ ಆದ, ವಿಸ್ತಾರವಾಗಿ ಮಹಾಭಾರತವನ್ನು ಜನಮೇಜಯನಿಗೆ ಹೇಳಿದನು. ಇದರಿಂದ ಅವನ ತೊನ್ನೆಲ್ಲ ವಾಸಿಯಾಗಿ ಪರಿಶುದ್ಧನಾದನು. ಈ ರೀತಿಯಲ್ಲಿ 'ಜೈಮಿನಿಭಾರತ'ವು ರಚನೆಯಾಯಿತು.

ನಂತರ ಜೈಮಿನಿಯು ತಾನು ಬರೆದ ಹದಿನೆಂಟು ಪರ್ವಗಳ ಮಹಾಭಾರತವನ್ನು ವೇದವ್ಯಾಸರಿಗೆ ಪರೀಕ್ಷಣಾರ್ಥವಾಗಿ ತೋರಿಸಿದನು. ಅವರು ಅದನ್ನು ಆಮೂಲಾಗ್ರವಾಗಿ ಪರಿಶೀಲಿಸಿ, ಹದಿನೆಂಟು ಪರ್ವಗಳಲ್ಲಿ ಅಶ್ವಮೇಧ ಪರ್ವವು ಮಾತ್ರ ತಮ್ಮದಕ್ಕಿಂತ ವಿಸ್ತಾರವಾಗಿಯೂ, ಹೆಚ್ಚು ಸುಂದರವಾಗಿಯೂ ಇದ್ದು, ಉಳಿದ ಪರ್ವಗಳು ಕಟುತರವಾಗಿದೆಯೆಂದು ಹೇಳಿ, ಆ ಉಳಿದ ಪರ್ವಗಳನ್ನು ಸಮುದ್ರಕ್ಕೆ ಹಾಕಿಬಿಡೆಂದು ಸೂಚಿಸಿದರು. ಜೈಮಿನಿಯು ಹಾಗೆಯೇ ಮಾಡಿ, ಅಶ್ವಮೇಧಪರ್ವವೊಂದನ್ನು ಮಾತ್ರ ಉಳಿಸಿದನು. ಹೀಗಾಗಿ ಆ ಭಾರತವು 'ಜೈಮಿನೀಯಾಶ್ವಮೇಧ'ವೆಂದೇ ಪ್ರಸಿದ್ಧವಾಯಿತು.

ಇದು ನಿಜವೋ ಎನ್ನುವಂತೆ ಜೈಮಿನೀ ಅಶ್ವಮೇಧಪರ್ವವೊಂದು ಮಾತ್ರ ಜನಪ್ರಿಯವಾಗಿ, ಉಳಿದ ಪರ್ವಗಳು ಪ್ರಚಾರಕ್ಕೆ ಬರಲಿಲ್ಲ.

ಅಲ್ಲದೆ ಜೈಮಿನಿಯು ಹದಿನೆಂಟು ಪರ್ವಗಳನ್ನೂ ರಚಿಸಿದ್ದನೆಂಬುದಕ್ಕೆ

ಕಥಂ ಯುಧಿಷ್ಠಿರಃ ಪ್ರೀತೋ  
ಮಮ ಪೂರ್ವ ಪಿತಾಮಹಃ  
ಹಯಮೇಧಂ ಕ್ರತುವರಂ  
ಚಕ್ರೇ ಬಂಧುಭಿರನ್ವಿತಃ  
(ಸಂ.ಜೈ.ಭಾ. ೧ನೇ ಅಧ್ಯಾಯದ ೨ನೇ ಶ್ಲೋಕ)

ಚತುರ್ದಶ ಪರ್ವಾಣಿ  
ಕಥಿತಾ ನಿವಿ ಶಾಂಪತೇ  
ಅಯಶ್ಚಾಶ್ರಮವಾಸಾಖ್ಯಂ  
ಪರ್ವರಾಜಂ ಭೃಣುಷ್ವನ್  
(ಅದೇ ೭೬ನೇ ಅಧ್ಯಾಯ ೧೪ನೇ ಶ್ಲೋಕ)

(ನಿನಗೆ ಹದಿನಾಲ್ಕು ಪರ್ವಗಳ ಭಾರತದ ಕಥೆಯನ್ನು ಈ ಮೊದಲೇ ಹೇಳಿದ್ದೇನೆ. ಈಗ ಹದಿನೈದನೆಯ ಆಶ್ರಮವಾಸಿಕ ಪರ್ವದ ಕಥೆಯನ್ನು ಹೇಳುತ್ತೇನೆ, ಕೇಳು ಜನಮೇಜಯ!)

ಎನ್ನುವ ಆಧಾರಗಳೇ ಸಾಕು.

ಅಲ್ಲದೆ ವ್ಯಾಸಭಾರತದ ಪ್ರತಿ ಪರ್ವದ ಪ್ರಾರಂಭದಲ್ಲಿ ಉಕ್ತವಾಗಿರುವ

'ನಾರಾಯಣಂ ನಮಸ್ಕೃತ್ಯ
ನರಂಚೈವ ನರೋತ್ತಮಂ
ದೇವೀಂ ಸರಸ್ವತೀಂ ವ್ಯಾಸಂ
ತತೋ ಜಯ ಮುದೀರಯೇತ್'

ಎಂಬ ಶ್ಲೋಕವನ್ನು ಜೈಮಿನಿಯೂ ಕೂಡ ತನ್ನ ಪ್ರತಿ ಪರ್ವದ ಪ್ರಾರಂಭದಲ್ಲಿ ಸೇರಿಸಿದ್ದನೆಂದೂ, ಇದರಿಂದ ಸ್ವಪಾಂಡಿತ್ಯದಿಂದ ಜೈಮಿನಿಯು ಹದಿನೆಂಟು ಪರ್ವಗಳ ಮಹಾಭಾರತವನ್ನು ರಚಿಸಿದ್ದನೆಂದೂ, ಅದರಲ್ಲಿ ಅಶ್ವಮೇಧಪರ್ವ ಮಾತ್ರ ಹೆಚ್ಚು ಪ್ರಚಾರಕ್ಕೆ ಬಂದು, ಕಾಲಗರ್ಭದಲ್ಲಿ ಉಳಿದ ಪರ್ವಗಳು ಕಣ್ಮರೆಯಾದವೆಂದು ಹೇಳ'ಬಹುದು.

ಕನ್ನಡದಲ್ಲಿ ಮೊದಲ ಜೈನ ಕವಿಗಳ ಪರಂಪರೆಯ ನಂತರ ವೀರಶೈವ ಕವಿಗಳ ಪರಂಪರೆಯಲ್ಲಿ ಷಡಕ್ಷರ ದೇವನು 'ರಾಜಶೇಖರ ವಿಳಾಸ' ಎನ್ನುವ ಉದ್ಗ್ರಂಥವನ್ನು ರಚಿಸಿದ. ಅದಕ್ಕೆ ಸಮನಾದ ಅಲಂಕಾರ ಗ್ರಂಥ ಆ ಸಮಯದಲ್ಲಿ ಬೇರೆ ಯಾವುದೂ ರಚನೆಯಾಗಲಿಲ್ಲವಂತೆ. ಅಂತಹ ಒಂದು ಕೃತಿಯನ್ನು ರಚಿಸಬೇಕೆಂಬ ಆಸೆಯಿಂದ, ಕಡೂರು ಜಿಲ್ಲೆಯ ಬಾಣಾವರದ ಹತ್ತಿರವಿರುವ ದೇವನೂರು ಗ್ರಾಮದ ಭಾರದ್ವಾಜ ಗೋತ್ರದ ಅಣ್ಣಯ್ಯ ಭಟ್ಟನ ಮಗ ಲಕ್ಷ್ಮೀಶನೆಂಬುವನು ತನ್ನ ಉಪಾಸನಾ ದೈವವಾದ ಲಕ್ಷ್ಮೀನಾರಾಯಣ ಸ್ವಾಮಿಯನ್ನು ಕುರಿತು ಏಳು ದಿನಗಳವರೆಗೆ ಸತತವಾಗಿ ಧ್ಯಾನಿಸಿ, ತಪಸ್ಸು ಮಾಡಿದನು. ಆತನ ಭಕ್ತಿಗೆ ಮೆಚ್ಚಿದ ಸ್ವಾಮಿಯ ಸ್ವಪ್ನದಲ್ಲಿ ಕಾಣಿಸಿಕೊಂಡು, "ಅಯ್ಯಾ ನಿನ್ನ ಅಭಿಲಾಷೆ ಈಡೇರುತ್ತದೆ. ಜೈಮಿನಿ ಮಹರ್ಷಿಯ ಭಾರತದಲ್ಲಿನ ಅಶ್ವಮೇಧದ ಕಥೆಯನ್ನು ಕನ್ನಡದಲ್ಲಿ ರಚಿಸಿ, ನನ್ನ ಅಂಕಿತವನ್ನಿರಿಸಿ ಪ್ರಚಾರ ಮಾಡು. ಆಗ ನಿನ್ನ ಕಾವ್ಯವು ಸರ್ವೋತ್ಕೃಷ್ಟವಾಗಿ, ಪ್ರಖ್ಯಾತವಾಗುವುದು." ಎಂದು ಹೇಳಿ ಅದೃಶ್ಯನಾದನು.

# ಹೇ! ದೇವಾ!



ಮೃಗ ಪಕ್ಷಿ ಕ್ರಿಮಿ ಕೀಟ ಜನುಮಗಳ ದಾಟಿಸಿಹೆ
ಎಲ್ಲಕ್ಕು ಮಿಗಿಲಾದ ನರಜನುಮ ಕರುಣಿಸಿಹೆ
ಎಲ್ಲ ವಿಷಯಗಳರಿವ ಜ್ಞಾನವನು ಕರುಣಿಸಿಹೆ
ಇನ್ನೇನು ಬೇಕಿಹುದು ನನಗೆ, ಹೇ ದೇವಾ?

ಊನವಿಲ್ಲದೆ ಇರುವ ಅಂಗಗಳ ಕೊಟ್ಟಿರುವೆ
ಭಾವನೆಯನುಚ್ಚರಿಪ ಶಕ್ತಿಯನು ಕೊಟ್ಟಿರುವೆ
ಇಚ್ಛೆಗಳನನುಭವಿಪ ಯೋಗ್ಯತೆಯ ಕೊಟ್ಟಿರುವೆ
ಇನ್ನೇನು ಬೇಕಿಹುದು ನನಗೆ, ಹೇ ದೇವಾ ?

ಯಂತ್ರಗಳ ರಚಿಸುವಾ ಶಕ್ತಿಯನು ಕೊಟ್ಟಿರುವೆ
ಮಂತ್ರಗಳ ಸಾಧನೆಯ ಶಕ್ತಿಯನು ಕೊಟ್ಟಿರುವೆ
ತಂತ್ರಗಳ ಗುಟ್ಟರಿವ ಶಕ್ತಿಯನು ಕೊಟ್ಟಿರುವೆ
ಇನ್ನೇನು ಬೇಕಿಹುದು ನನಗೆ, ಹೇ ದೇವಾ ?

ಸಾಕೆಂದೆನೇನಿನಿತೆ ?! ಇಲ್ಲ, ಇಲ್ಲವು ದೇವಾ
ಕರುಣಿಸೈ ನಿನ್ನನ್ನೆ ಎಲ್ಲೆಲ್ಲು ಕಾಣುವಾ,
ಸತತ ನಿನ್ನಯ ಸೇವೆ, ಸ್ತುತಿಗಳನೆ ನಡೆಸುವಾ,
ಕೊನೆಗೆ ನಿನ್ನೊಳೆ ಬೆರೆವ ವರವ ಹೇ ದೇವಾ!

---ಎಂ.ಟಿ ಸಂಪತ್‌ಕುಮಾರನ್.

ಅದರಂತೆ ಲಕ್ಷ್ಮೀಶನು ಎಚ್ಚರಗೊಂಡ. ಮೇಲೆ ಸ್ವಪ್ನವನ್ನು ನೆನೆದು ಸಂತೋಷಗೊಂಡು, ಒಂದು ಒಳ್ಳೆಯ ದಿನ ನೋಡಿ, ಅಂದಿನಿಂದ ಗ್ರಂಥ ರಚನೆ ಮಾಡಲು ಪ್ರಾರಂಭಿಸಿದನು. ಪ್ರತಿ ನಿತ್ಯ ತನ್ನ ನಿತ್ಯ ಕರ್ಮಗಳನ್ನು ಪೂರೈಸಿಕೊಂಡು, ಭಕ್ತಿಯುತನಾಗಿ, ದೇವರ ಸನ್ನಿಧಿಯಲ್ಲಿ ನಿಂತು, ಉನ್ಮತ್ತಾವಸ್ಥೆಯಿಂದ ಗ್ರಂಥವನ್ನು ರಚಿಸಲು ಪ್ರಾರಂಭಿಸಿ, ಪೂರ್ತಿಗೊಳಿಸಿದನು. ಈ ರೀತಿಯಲ್ಲಿ ಕನ್ನಡ ಜೈಮಿನಿ ಭಾರತವು ಸೃಷ್ಟಿಯಾಯಿತು. ಸಂಸ್ಕೃತ ಜೈಮಿನಿ ಭಾರತದ ಕಥಾಭಾಗವನ್ನು ಕಾವ್ಯಲಕ್ಷಣ ಸಹಿತವಾಗಿ ಕನ್ನಡಕ್ಕೆ ಪರಿವರ್ತಿಸುವಾಗ, ಕಾವ್ಯಶೋಭೆಯನ್ನು ಹೆಚ್ಚಿಸುವುದಕ್ಕಾಗಿ ತನ್ನ ಶೈಲಿಗೆ ತಕ್ಕಂತೆ ಮಾರ್ಪಡಿಸಿಕೊಂಡು, ವರ್ಣನಾಚಾತುರ್ಯದಿಂದ ಚತುರೋಕ್ತಿ, ಚಮತ್ಕಾರವಾಗಿ, ಪ್ರಾಸಾನುಪ್ರಾಸ ಶಬ್ದಾಲಂಕಾರ, ಅರ್ಥಾಲಂಕಾರಗಳನ್ನು ಸೇರಿಸಿ, ಲಕ್ಷ್ಮೀಶನು ತನ್ನ ಕಾವ್ಯವನ್ನು ರಚಿಸಿದನು. ಇದರಿಂದ ಲಕ್ಷ್ಮೀಶನ ಕಾವ್ಯವು ಸಂಸ್ಕೃತ ಜೈಮಿನಿ ಭಾರತಕ್ಕಿಂತಲೂ ಹೆಚ್ಚು ಕಾವ್ಯಾಲಂಕಾರ ಭರಿತವಾಗಿ, ಮನೋಹರವಾಗಿರುವುದು. ಈ ಕಾರಣದಿಂದಲೇ ಇದು ಸುಮಾರು ಮೂರು ಶತಮಾನಗಳಿಂದಲೂ ಲಕ್ಷಾಂತರ ರಸಿಕರನ್ನು ಆಕರ್ಷಿಸಿದೆ, ಆಬಾಲವೃದ್ಧರು ಆದರದಿಂದ, ಓದಿ, ಕೇಳಿದ್ದಾರೆ. ಪುರಾಣ ಪ್ರವಚನಗಳಲ್ಲಿ ಈ ಕಾವ್ಯಕ್ಕೆ ಪ್ರಥಮ ಸ್ಥಾನವಿದೆ. ಗಮಕಿಗಳಿಗಂತೂ ಈ ಕಾವ್ಯದ ಒಂದೊಂದು ಅಧ್ಯಾಯವೂ ರಸಪುರಿ ಮಾವಿನ ಹಣ್ಣಿನ ತರಹದ್ದಾಯಿತು.

ಕ್ರಿ.ಶ. ೧೭ನೇ ಶತಮಾನಕ್ಕೆ ಸೇರಿದ ಈ ಕವಿಯು ತನ್ನ ಬಗ್ಗೆ ಈ ಕಾವ್ಯದಲ್ಲಿ ಏನನ್ನೂ ಹೇಳಿಕೊಂಡಿಲ್ಲ. ಆದರೆ ತನ್ನ ಉಪಾಸನಾ ದೈವವಾದ ಶ್ರೀಲಕ್ಷ್ಮೀಕಾಂತಸ್ವಾಮಿಯ ನೆಲೆಯನ್ನು ೨೬ನೇ ಸಂಧಿಯ ಕೊನೆಯ ಪದ್ಯದಲ್ಲಿ ದೇವನೂರು ಲಕ್ಷ್ಮೀಕಾಂತನು ಎಂದು ಹೇಳಿರುವುದೇ ಅಲ್ಲದೆ, ದೇವನೂರಿನ ಲಕ್ಷ್ಮೀಕಾಂತಸ್ವಾಮಿಯ ದೇವಾಲಯದಲ್ಲಿ ಈಗಲೂ ಲಕ್ಷ್ಮೀಶನು ಕಾವ್ಯ ರಚಿಸಿದ ಸ್ಥಳವನ್ನು ಪರಂಪರೆಯಿಂದ ಬಂದುದಾಗಿ ತೋರಿಸುವರು. ಇನ್ನೂ ಕೆಲವು ಆಧಾರಗಳನ್ನೂ ಹೇಳುವರು. ಆ ಕಾಲದಲ್ಲೆ ಲಕ್ಷ್ಮೀಶನು ಉಭಯಭಾಷಾಪಾಂಡಿತ್ಯ ಉಳ್ಳವನಾಗಿದ್ದು, ಅವನ ವಾಗ್ಝರಿಗೆ ಮೆಚ್ಚಿ ಆಗಿನ ಕಾಲದ ಪಂಡಿತ ಮಂಡಲಿಯವರು, ಅದೇ ದೇವಾಲಯದಲ್ಲಿ ಅವನಿಗೆ 'ಕರ್ಣಾಟ ಕವಿ ಚೂತವನ ಚೈತ್ರ' ಎಂಬ ಬಿರುದನ್ನು ನೀಡಿ, ಸನ್ಮಾನಿಸಿದರೆಂದು ಹೇಳಲಾಗುತ್ತದೆ.

ಈ ಕಾವ್ಯದಲ್ಲಿ ೩೪ ಸಂಧಿಗಳೂ, ೧೯೧೬ ಪದ್ಯಗಳೂ ಇವೆ. ಇವು ಕನ್ನಡ ಛಂದಸ್ಸಿನಲ್ಲೆ ತುಂಬಾ ಕಷ್ಟಕರವಾದ, ವಾರ್ಧಕ ಷಟ್ಪದಿಯಲ್ಲಿ ಕನ್ನಡ ಮಾತ್ರಾ

ಗಣ ನಿಯಮಗಳಿಗೆ ಒಳಪಟ್ಟು ರಚಿತವಾಗಿದೆ. ಇದರ ಶೈಲಿಯು ಇಂಪಾಗಿದ್ದು, ಸರಳಪದಗಳಿಂದ ಕೂಡಿ, ಮನೋಹರವಾದ ಉಪಮಾನಗಳಿಂದಲೂ, ಚತುರೋಕ್ತಿ ಭರಿತವಾದ ನಾಣ್ಣುಡಿಗಳಿಂದಲೂ ಕೂಡಿದೆ. ಪದಲಾಲಿತ್ಯವು ಮೃದುಮಧುರವಾಗಿ ಶ್ರಾವ್ಯವಾಗಿದೆ. ಅರ್ಥವು ಗಂಭೀರ (ಅರ್ಥಗೌರವ) ವಾಗಿದ್ದು, ಶ್ಲೇಷೆವ್ಯಂಗ್ಯಗಳಿಂದ ಕೂಡಿ ಕಂಗೊಳಿಸುತ್ತಿದೆ. ಕಾವ್ಯಲಕ್ಷಣ ಅಂಗಗಳಾದ ವರ್ಣನಾ ವೈಖರಿಗಳಿಂದ ಕೂಡಿದ ಯಮಕ, ವೃತ್ತನುಪ್ರಾಸ, ಛೇಕಾನುಪ್ರಾಸ, ಲಾಟಾನುಪ್ರಾಸಗಳೆಂಬ ಶಬ್ದಾಲಂಕಾರಗಳೂ, ಅರ್ಥಾಲಂಕಾರಗಳಿಂದಲೂ ಕೂಡಿ ಕಾವ್ಯವು ರಸಭರಿತವಾಗಿದೆ. ರಮ್ಯವಾದ ಉಪಮಾನ ಉಪಮೇಯಗಳೊಡನೆ ಶ್ಲೇಷಾರ್ಥವನ್ನು ಸೇರಿಸಿ ವರ್ಣಿಸಲ್ಪಟ್ಟಿರುವ ಹೃದಯಂಗಮವಾದ ಉತ್ಪ್ರೇಕ್ಷೆ, ಅತಿಶಯೋಕ್ತಿ, ಕಾವ್ಯಾಲಂಕಾರ, ಸದ್ಗುಣ ರೂಪಕ, ಅರ್ಥಾಂತರನ್ಯಾಸ, ಸ್ವಭಾವೋಕ್ತಿ, ಪ್ರತೀಪಾಲಂಕಾರ, ಅಪ್ರಸ್ತುತ ಪ್ರಶಂಸೆಗಳಿಂದ ತುಂಬಿ ತುಳುಕುವ ಈ ಕಾವ್ಯವು ಪಂಡಿತ ಪಾಮರರನ್ನು ರಂಜಿಸುತ್ತಿದೆ. ಇವುಗಳೊಂದಿಗೆ ಕೆಲವು ಕಡೆ ಅಪಹ್ನವ, ಪರಿಸಂಖ್ಯೆ, ಯಥಾಕ್ರಮ, ಅನುಮಿತಿ, ವಿರೋಧಾಭಾಸ, ಭ್ರಾಂತಿಮದ ಅಲಂಕಾರಗಳೂ ಉಕ್ತವಾಗಿವೆ. ಅಲ್ಲದೆ ಈ ಕವಿಯು ತನ್ನ ವಾಕ್ಚಾತುರ್ಯದಿಂದ ಓದುಗರ ಮನಸ್ಸನ್ನು ಆಕರ್ಷಿಸುವಂತಹ ಲೋಕೋಕ್ತಿಗಳನ್ನು ನಿರ್ಮಿಸಿ ತನ್ನ ಪ್ರತಿಭೆಯನ್ನು ಮೆರೆಸಿದ್ದಾನೆ -- ಕಯ್ಯಂ ಪಿಡಿದೊಡೆ ಮೈತಾನೆ ಬಹುದು, ಜಂಬುಕಂ ಜನಿಸುವುದೆ ಸಿಂಗದುದರದೊಳ್, ಬೆಳ್ದಿಂಗಳ್ಗೆ ಬೆಮರುಂಟೆ ದೇಸಿಗೆಯೊಳ್ - ಇತ್ಯಾದಿ.

ಈತನು ಪ್ರಯೋಗಿಸಿರುವ ಉಪಮೆಗಳಂತೂ ಅತ್ಯಂತ ಮನೋಹರವಾಗಿವೆ - ಖಳರಪ್ಪುರುಷಾರ್ಥಮಂ ಕಾಮಿಸುವ ಯಾಚಕಾವಳಿಯಂತೆ, ಸುರಭೂಜಮಿರೆ ಶಾಲ್ಮಲಿಯ ನರಸುವಂತೆ - ಇತ್ಯಾದಿ.

ಕಾವ್ಯ ಲಕ್ಷಣಕ್ಕೆ ಅನುಗುಣವಾದ ಪುರವರ್ಣನೆ, ದೇಶವರ್ಣನೆ, ಸಮುದ್ರವರ್ಣನೆ, ಪ್ರಪಾಶಾಲೆ, ಮಾಲೆಗಾರ್ತಿ, ಸೂರ್ಯೋದಯ, ಸೂರ್ಯಾಸ್ತ, ಋಷ್ಯಾಶ್ರಮ, ರತಿಕ್ರೀಡೆ, ವೇಶ್ಯಾವಾಟಿಕೆ, ಜಲಕ್ರೀಡೆ ಇತ್ಯಾದಿ ವರ್ಣನೆಗಳು ವರ್ಣಿಸಲ್ಪಟ್ಟು ಗಂಭೀರವಾಗಿ, ಸರಳಾರ್ಥ ಗುಂಭಿತವಾಗಿದೆ ಈ ಕಾವ್ಯ

ಈ ರೀತಿಯಲ್ಲಿ ಮೃದುಮಧುರ ಸರಸೋಕ್ತಿಗಳಿಂದ ಕೂಡಿ, ಅಲಂಕಾರ ಸಹಿತವಾಗಿ ಅರ್ಥಗಾಂಭೀರ್ಯದಿಂದಿರುವ ಈ ಕಾವ್ಯವು ಭಕ್ತಿರಸ ಪ್ರಧಾನವಾಗಿದ್ದು. ಸುಂದರಪದ ಸುಕುಮಾರಶಯ್ಯಾ ಸಮಾಲಂಬಿತವಾಗಿದ್ದು ಸರ್ವಜನ ಸಂಗ್ರಾಹ್ಯವಾಗಿದೆ.

ಇಂತಹ ಮಹಾನ್ ಕೃತಿಯನ್ನು ತಮ್ಮ ಪಾಂಡಿತ್ಯ ಪ್ರತಿಭೆಯಿಂದ ಇದ್ದ ಲೋಪದೋಷಗಳನ್ನು ಸರಿಪಡಿಸಿ, ಪರಿಷ್ಕೃತಗೊಳಿಸಿ ಮೊಟ್ಟಮೊದಲು ಪ್ರಕಟಿಸಿದವರು ಮೈಸೂರು ಮಹಾರಾಜಾ ಕಾಲೇಜಿನ ಪ್ರಧಾನ ಪಂಡಿತರಾಗಿದ್ದ ಪಿ. ಆರ್. ಕರಿಬಸವಶಾಸ್ತ್ರಿಗಳು. ಇವರ ಪ್ರತಿಗಳು ಮುಗಿದ ಕಾರಣ ಮತ್ತೊಮ್ಮೆ ಈ ಕಾವ್ಯವನ್ನು ಪ್ರಕಟಿಸುವ ಪ್ರಯತ್ನ ನಡೆಯಿತು.

ಈ ಸಲ ಕರ್ನಾಟಕ ಸಾಹಿತ್ಯ ಪರಿಷತ್ತಿನಲ್ಲಿ ಗ್ರಂಥ ಸಂಶೋಧನಾ ಕಾರ್ಯ ಮಾಡುತ್ತಿದ್ದ ವೇದಮೂರ್ತಿ ಕಡಬದ ನಂಜುಂಡ ಶಾಸ್ತ್ರಿಗಳು ಈ ಗ್ರಂಥವನ್ನು ಪರಿಷ್ಕರಿಸಿ, ಮೂಲವನ್ನು ತಿದ್ದಿ ಕ್ರಮಪಡಿಸಿದರು. ಆದರೆ ಈ ಕಾವ್ಯಕ್ಕೆ ಸರಿಯಾದ ಟೀಕೆಗಳಿರಲಿಲ್ಲ. ಅಲ್ಲದೆ ವಿಶ್ವವಿದ್ಯಾನಿಲಯದ ಉಚ್ಚ ಪರೀಕ್ಷೆಗಳಿಗೆ ಈ ಕಾವ್ಯವನ್ನು ಪಠ್ಯಪುಸ್ತಕವಾಗಿ ನಿಯಮಿಸಲ್ಪಡುತ್ತಿದ್ದುದರಿಂದ ಸೂಕ್ತವಾದ ಕ್ರಮಬದ್ಧವಾದ ಟೀಕೆ ಇಲ್ಲದ್ದರಿಂದ, ಅಂತಹ ಟೀಕಾ ತಾತ್ಪರ್ಯವನ್ನು ವಿಶೇಷಾರ್ಥಗಳೊಡನೆ ರಚಿಸುತ್ತಾ, ರಚನೆಯಾದಂತೆಲ್ಲ ಮುದ್ರಿಸುತ್ತಾ ಬಂದರು ಶಾಸ್ತ್ರಿಗಳು. ಆದರೆ ಹದಿನೆಂಟನೆ ಸಂಧಿಗೆ ಟೀಕೆಯನ್ನು ಬರೆಯುತ್ತಿದ್ದಾಗ ನಂಜುಂಡ ಶಾಸ್ತ್ರಿಗಳು ಅಕಾಲ ಮರಣಕ್ಕೆ ತುತ್ತಾದರು. ಹೀಗಾಗಿ ಈ ಕಾರ್ಯ ಅರ್ಧಂಬರ್ಧವಾಯಿತು.

ಇದು ಪ್ರಕಾಶಕರಿಗೂ, ಮುದ್ರಕರಿಗೂ ಯೋಚನೆಯ ವಿಷಯವಾಯಿತು. ಈ ಗ್ರಂಥವು ಒಕ್ಕಲಿಗರ ಸಂಘದ ಪ್ರೆಸ್‌ನಲ್ಲಿ ಮುದ್ರಣವಾಗುತ್ತಿತ್ತು. ಈ ಕಾರ್ಯವನ್ನು ಯಾರು ಮುಂದುವರಿಸಬಹುದೆಂದು ಆ ಪ್ರೆಸ್‌ನ ಮ್ಯಾನೇಜರ್ ಬಿ. ಆರ್. ನರಸಿಂಹಯ್ಯನವರು ಯೋಚಿಸುತ್ತಿದ್ದಾಗ ಅವರಿಗೆ ತಮ್ಮ ಬಾಲ್ಯ ಸ್ನೇಹಿತರಾದ ಹೆಚ್. ನಾಗಪ್ಪನವರು ನೆನಪಿಗೆ ಬಂದರು.

ಈ ನಾಗಪ್ಪನವರು ಬೆಂಗಳೂರು ಸರ್ಕಾರಿ ವಿದ್ಯಾರ್ಥಿನಿಯರ ಶಾಲೆಯಲ್ಲಿ ದಿವಂಗತ ನಂಜುಂಡ ಶಾಸ್ತ್ರಿಗಳೊಂದಿಗೆ ಸಹೋಪಾಧ್ಯಾಯರಾಗಿ ಆರು ವರ್ಷಕಾಲ ಕೆಲಸ ಮಾಡಿದ್ದರು. ನಂತರ ಹೆಚ್. ನಾಗಪ್ಪನವರು ವಿಶ್ವೇಶ್ವರಪುರದ ಪ್ರಾಥಮಿಕ ಶಾಲೆಯ ಮುಖ್ಯೋಪಾಧ್ಯಾಯರಾಗಿ ಕೆಲಸ ಮಾಡತೊಡಗಿದ್ದರು. ಅಲ್ಲದೆ ಪ್ರಾಚೀನ ಕಾವ್ಯಗಳಲ್ಲಿ ಇವರಿಗೆ ಅಪರಿಮಿತ ಆಸಕ್ತಿಯೂ ಸಂಶೋಧನೆಯಲ್ಲಿ ಆಸಕ್ತಿಯೂ ಇದ್ದಿತು.

ಮಿತ್ರ ನರಸಿಂಹಯ್ಯನವರು ನಾಗಪ್ಪನವರನ್ನು ಸಂಧಿಸಿ ಪಂಡಿತ ಕೆ. ನಂಜುಂಡಶಾಸ್ತ್ರಿಗಳ ಕಾರ್ಯವನ್ನು ಮುಂದುವರಿಸಬೇಕೆಂದು ಕೇಳಿಕೊಂಡರು. ಶಾಸ್ತ್ರಿಗಳು ತಾವು ಮಾಡುತ್ತಿದ್ದ ಕಾರ್ಯವನ್ನೂ ಬದುಕಿದ್ದಾಗ ನಾಗಪ್ಪನವರಿಗೆ ತಿಳಿಸುತ್ತಿದ್ದುದೇ ಅಲ್ಲದೆ, ಅವರಿಗೆ ಓದಲು, ತಿದ್ದಲು, ಸೂಚನೆಗಳನ್ನು ನೀಡಲು ಹಸ್ತಪ್ರತಿ, ಮುದ್ರಿತ ಪ್ರತಿಗಳನ್ನು ನೀಡುತ್ತಿದ್ದುದರಿಂದ, ಅದು ವರೆವಿಗೆ ಆಗಿರುವ ಕಾರ್ಯ ಎಷ್ಟು, ಯಾವ ರೀತಿಯದ್ದು ಎನ್ನುವ ಎಲ್ಲ ವಿವರಗಳೂ ನಾಗಪ್ಪನವರಿಗೆ ಗೊತ್ತಿದ್ದುದರಿಂದ, ಲಕ್ಷ್ಮೀಶ ಭಾರತದ ಉಳಿದ ಕಾರ್ಯವನ್ನು ಮುಂದುವರಿಸಲು ಅವರು ಒಪ್ಪಿಕೊಂಡರು. ಹೀಗಾಗಿ ನಾಗಪ್ಪನವರು ಕಾವ್ಯದ ಉಳಿದ ಕಾರ್ಯವನ್ನು ತನ್ಮಯತೆಯಿಂದ ಮಾಡಿ ಮುಗಿಸಿದರು.

ಲಕ್ಷ್ಮೀಶ ಕವಿಯ ಜೈಮಿನಿ ಭಾರತದ ಹೊಸರೂಪದ ಉದ್ಗ್ರಂಥವು ೧೯೩೭ ರಲ್ಲಿ ಶ್ರೀ ಸರಸ್ವತೀ ರತ್ನಾಕರ ಬುಕ್ಕುಡಿಪ್ಪೋ ನವರಿಂದ ಪ್ರಕಟಗೊಂಡಿತು. ಕ್ರೌನ್ ಆಕಾರದಲ್ಲಿ ಸುಮಾರು ೧೨+೯೪೦ ಪುಟಗಳ ಬೃಹತ್ ಗ್ರಂಥವಾಗಿ ಹೊರಬಂದಿತು. ಇದರಲ್ಲಿ ದಪ್ಪಕ್ಷರಗಳಲ್ಲಿ ಜೈಮಿನಿ ಭಾರತದ ಮೂಲ ಪದ್ಯ ಆ ಪದ್ಯದ ಪ್ರತಿಪದಾರ್ಥ, ತಾತ್ಪರ್ಯ, ವ್ಯಾಕರಣ ವಿಶೇಷಣಗಳು, ವಿಶೇಷಾರ್ಥಗಳು, ಭಾವಾರ್ಥಗಳು - ಉದ್ಧೃತ ವಿವಿದ ಸಂಧಿ - ಸಮಾಸಗಳ ವಿವರಗಳು ಇದ್ದು ತುಂಬಾ ವಿಸ್ತೃತ ಹಾಗೂ ಪರಿಪೂರ್ಣ ಟೀಕಾ ತಾತ್ಪರ್ಯ ಕೃತಿ ಎನಿಸಿಕೊಂಡಿತು. ಇದರ ಮೊದಲ ಮುದ್ರಣದಲ್ಲಿ ೨೫೦೦ ಪ್ರತಿಗಳನ್ನು ಹಾಕಿದ್ದು, ಬೆಲೆ ೨೮-೦೦ ರೂ. ಗಳಾಗಿದ್ದಿತು. ನ್ಯೂಸ್ ಪ್ರಿಂಟ್‌ನಲ್ಲಿ ಪ್ರಕಟವಾಗಿದ್ದುದು ಎಂಬುದನ್ನು ಬಿಟ್ಟರೆ, ಈ ಪುಸ್ತಕವು ಜೈಮಿನಿ ಭಾರತದ ಅತ್ಯುತ್ತಮ ಪುಸ್ತಕ ಎನ್ನಬಹುದು. ಇದು ಮತ್ತೆ ಎರಡನೇ ಮುದ್ರಣ ಕಂಡಿತೋ ಇಲ್ಲವೋ ತಿಳಿಯದು. ಅಂತೂ ಇಂದಿಗೂ ಇದೊಂದು ಅಪರೂಪ ಕೃತಿಯಾಗಿದೆ. ೫೮ ವರ್ಷಗಳೇ ಕಳೆದಿದ್ದರೂ ಮತ್ತೆ ಈ ಕೃತಿಯನ್ನು ಪ್ರಕಟಿಸಲು ಸಾಧ್ಯವಾಗಿಲ್ಲ; ಯಾರೂ ಪ್ರಯತ್ನಿಸಲೂ ಇಲ್ಲ.

ಸಾಕಷ್ಟು ಜೈಮಿನಿ ವಚನ ಭಾರತ ರೂಪಾಂತರಗಳು ಬಂದಿರಬಹುದು. ಆದರೆ ಅವು ಯಾವುವೂ ಈ ಕೃತಿಯ ಸಾಧನೆ ಹಾಗೂ ಮೌಲ್ಯಗಳನ್ನು ಮೀರಿಸಲಾರವು.

ಒಟ್ಟಿನಲ್ಲಿ ಕನ್ನಡ ಸಾಹಿತ್ಯದ ಒಂದು ಅಮೂಲ್ಯ ಕೃತಿ ರತ್ನವಿದು. ಈ ನಿಟ್ಟಿನಲ್ಲಿ ದುಡಿದ ವೇದಮೂರ್ತಿ ಪಂಡಿತ ಕೆ. ನಂಜುಂಡಶಾಸ್ತ್ರಿಗಳು ಹಾಗೂ ಬ್ರ|| ಶ್ರೀ|| ಹೆಡ್ಮಾಸ್ಟರ್ ಹೆಚ್. ನಾಗಪ್ಪನವರು ಅಭಿನಂದನಾರ್ಹರು ಹಾಗೂ ಸದಾಸ್ಮರಣೀಯರು.

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ (ವೈಕುಂಠ) ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಅಲ್ಪಾಹಾರ ಸೌಲಭ್ಯ.

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್‌ಪ್ರದರ್ಶನ, ಭಕ್ತಿ ಸಂಗೀತ.

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ ೭-ನೇ ಮೈಲಿಯ ಬಳಿ ವೈದ್ಯಸೌಲಭ್ಯ ಉಪಹಾರ ಸೌಲಭ್ಯ ಕ್ಯಾಂಟೀನ್.

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ ಹಾಗೂ ಉಚಿತ ಬಸ್ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಯಾತ್ರಿಕರನ್ನು ಪಂಡಾಗಳು, ವಂಚಕರಿಂದ ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಂದು ಅಧಿಕಾರಿ ಮತ್ತು ಸಿಬ್ಬಂದಿ.

**ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.**

ಗಮನಿಕೆ: ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ ೮--೩೦ ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೆ ಪ್ರಧಾನ ಅಂಚೆ ಕಚೇರಿಯು ರಾತ್ರಿ ೧೦-೩೦ ರಿಂದ ೧--೦೦ ಗಂಟೆಯವರೆಗೆ ಕೆಲಸಮಾಡುತ್ತದೆ.

# ಶ್ರೀರಾಮ, ಶ್ರೀಕೃಷ್ಣ

ಶಿವದೇವಾನಂದಸ್ವಾಮಿ.

ಯದಾ ಯದಾ ಹಿ ಧರ್ಮಸ್ಯ
ಗ್ಲಾನಿರ್ಭವತಿ ಭಾರತ
ಅಭ್ಯುತ್ಥಾನ ಮಧರ್ಮಸ್ಯ
ತದಾತ್ಮಾನಂ ಸೃಜಾಮ್ಯಹಮ್

ಎಂದು ಭಗವಂತನು ಧರ್ಮವನ್ನು ಉದ್ಧರಿಸಲು ತಾನೇ ಅವತರಿಸಿ ಬರುತ್ತಿರುತ್ತೇನೆಂದು ಭಗವದ್ಗೀತೆಯಲ್ಲಿ ಹೇಳಿದ್ದಾನೆ. ಅಂತಹಾ ಭಗವದವತಾರಗಳು ಅನಂತವಾಗಿ ಆಗಿವೆ. ಆದರೆ ಅವುಗಳಲ್ಲಿ ಮುಖ್ಯವೆನಿಸಿದ ಇಪ್ಪತ್ತು ನಾಲ್ಕು ಅವತಾರಗಳನ್ನು ಭಾಗವತ ಪುರಾಣವು ಉಲ್ಲೇಖಿಸಿವೆ. ಅದರಲ್ಲಿಯೂ ದಶಾವತಾರಗಳೆಂದು ಕರೆಯಲ್ಪಡುವ - ಮತ್ಸ್ಯ, ಕೂರ್ಮ, ವರಾಹ, ನೃಸಿಂಹ, ವಾಮನ, ಪರಶುರಾಮ, ಶ್ರೀರಾಮ, ಶ್ರೀಕೃಷ್ಣ, ಬುದ್ಧ, ಕಲ್ಕಿ - ಈ ಹತ್ತು ಅವತಾರಗಳು ಪ್ರಸಿದ್ಧವಾಗಿವೆ. ಈ ಹತ್ತರಲ್ಲಿಯೂ ಅತ್ಯಂತ ಪ್ರಸಿದ್ಧವಾಗಿಯೂ, ಜನಪ್ರಿಯವಾಗಿಯೂ, ಅನುದಿನವೂ ಎಲ್ಲರಿಂದಲೂ ಆರಾಧಿಸಲ್ಪಡುತ್ತಿರುವ ಅವತಾರಗಳು ಶ್ರೀರಾಮ, ಶ್ರೀಕೃಷ್ಣರ ಚರಿತ್ರೆಗಳನ್ನು ಆಧಾರವಾಗಿಟ್ಟುಕೊಂಡು ಅನೇಕ ಕವಿಗಳು ಎಷ್ಟೋ ಕಾವ್ಯಗಳನ್ನು ಕಥೆಗಳನ್ನು ರಚಿಸಿದ್ದಾರೆ. ಕುಮಾರವ್ಯಾಸನು ತಮ್ಮ "ಕರ್ನಾಟ ಭಾರತ ಕಥಾಮಂಜರಿ"ಯ ಪೀಠಿಕೆಯಲ್ಲಿ ಈರೀತಿ ಹೇಳಿದ್ದಾನೆ-

ತಿಣಿಕಿದನು ಫಣಿರಾಯ ರಾಮಾ-
ಯಣದ ಕವಿಗಳ ಭಾರದಲಿ ತಿಂ-
ತಿಣಿಯ ರಘುವರ ಚರಿತೆಯಲಿ
ಕಾಲಿಡಲು ತೆರಪಿಲ್ಲ
ತಿಳಿಯ ಹೇಳುವೆ ಕೃಷ್ಣಕಥೆಯನು
ಇಳೆಯ ಜಾಣರು ಮೆಚ್ಚುವಂತಿರೆ
ನೆಲೆಗೆ ಪಂಚಮ ಶ್ರುತಿಯ
ನೊರೆವೆನು ಕೃಷ್ಣ ಮೆಚ್ಚಲಿಕೆ

ಕೃಷ್ಣಕಥೆಯನ್ನು ರಚಿಸಿರುವ ಕವಿಗಳಸಂಖ್ಯೆಯೂ ಏನೂ ಕಡಿಮೆಯದಲ್ಲ. ಎಲ್ಲಾ ಭಾಷೆಗಳಲ್ಲಿಯೂ ಅನೇಕರೀತಿಯ ಸಾಹಿತ್ಯಸೃಷ್ಟಿಯಾಗಿದೆ. ಎಲ್ಲೆಲ್ಲಿ ನೋಡಿದರೂ ಶ್ರೀರಾಮ, ಶ್ರೀಕೃಷ್ಣರ ಗುಣಗಾನವೇ ಕಂಡುಬರುತ್ತದೆ. ಮುಖ್ಯವಾಗಿ ವೈಷ್ಣವ ಸಂಪ್ರದಾಯದಲ್ಲಂತೂ ಈ ಎರಡು ನಾಮಗಳೇ ಬಹು ಪ್ರಸಿದ್ಧವೂ, ಪ್ರಿಯವೂ ಆಗಿಬಿಟ್ಟಿವೆ.

ಈ ಎರಡು ಅವತಾರಗಳೂ - ಕವಿಗಳಿಗೂ, ಲೇಖಕರಿಗೂ, ಶಿಲ್ಪಿಗಳಿಗೂ, ಚಿತ್ರಕಾರರಿಗೂ, ಗಾಯಕರಿಗೂ, ಕಥಕರಿಗೂ, ನರ್ತಕರಿಗೂ - ಇನ್ನೂ ಅನೇಕ ಕಲಾಕಾರರಿಗೂ, ದಾಸರಿಗೂ, ಭಕ್ತರಿಗೂ - ಉಂಟುಮಾಡಿದಷ್ಟು ಸ್ಫೂರ್ತಿಯನ್ನು ಮತ್ತಾವ ಅವತಾರವೂ ಉಂಟುಮಾಡಿಲ್ಲವೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಎಲ್ಲಾ ಭಜನೆ, ಸಂಕೀರ್ತನೆ, ಸ್ತೋತ್ರ, ಗೀತೆಗಳಲ್ಲಿಯೂ ಈ 'ರಾಮ', 'ಕೃಷ್ಣ' ಶಬ್ದಗಳು, ಭಾವಗಳು ಅತ್ಯಂತ ಸನ್ನಿಹಿತವಾಗಿ ಸೇರಿಕೊಂಡಿವೆ. ಎರಡೂ ಸೇರಿ ಒಂದೇ ನಾಮದಂತೆ ಆಗಿವೆ. ಈ ಎರಡನ್ನೂ ಸೇರಿಸಿ 'ರಾಮಕೃಷ್ಣ' ಎಂದು ಒಬ್ಬರಿಗೇ ಹೆಸರಿಡುವುದು ಸಹ ರೂಢಿಯಾಗಿ ಬಿಟ್ಟಿದೆ ಎಂದಮೇಲೆ ಎರಡರ ಐಕ್ಯತೆಯ ಪ್ರಧಾನ್ಯ ಕಂಡುಬರುತ್ತದೆ. ಪ್ರಸಿದ್ಧ ಯುಗಪುರುಷನು ಜಗದ್ವಿಖ್ಯಾತನಾದ ವಿವೇಕಾನಂದನನ್ನು ಈ ಲೋಕಕ್ಕೆ ದಯಪಾಲಿಸಿದ ಮಹಾಗುರುವು ಸಹ ಈ 'ಶ್ರೀರಾಮಕೃಷ್ಣ' ನಾಮಧೇಯನೇ ಅಲ್ಲವೇ! ಈ ಪಾವನನಾಮವು ಘೋರಭವತಾಪಸಂತಪ್ತರಾದ ಅನೇಕ ಜನರ ಹೃದಯಗಳಲ್ಲಿ ಅಮೃತ ಸೇಚನವನ್ನು ಮಾಡಿ ನವಚೈತನ್ಯವನ್ನು ನೀಡುತ್ತಿದೆ. ಇನ್ನೂ ಅನೇಕರು ಈ 'ರಾಮ-ಕೃಷ್ಣ' ಸಂಯುಕ್ತನಾಮದಿಂದ ರಾರಾಜಿಸಿದ್ದಾರೆ.

ಈ ಶ್ರೀರಾಮ, ಶ್ರೀಕೃಷ್ಣ ಶಬ್ದಗಳು ಬಿಡಿಸಲಾರದಷ್ಟು ಸನ್ನಿಹಿತವಾಗಿ, ಸಂಯುಕ್ತವಾಗಿವೆ. ಇವು ಹೀಗೆ ಎರಡೂ ಒಂದಾಗಿ ಐಕ್ಯತೆಯನ್ನು ಹೊಂದಲು ಆ ಎರಡು ಅವತಾರಗಳಲ್ಲಿನ ವಿಶೇಷಗಳೇ ಕಾರಣವಾಗಿವೆ. ಅವೆಲ್ಲವೂ ನಮಗೆ ಬೇಕಾಗಿವೆ. ನಮ್ಮ ಜೀವನದಲ್ಲಿ ಅನುಸಂಧಾನಮಾಡಬೇಕಾದ, ಧ್ಯಾನಿಸಿ ರೂಢಿಸಿಕೊಳ್ಳಬೇಕಾದ ತತ್ವಗಳು ಈ ಎರಡೂ ಅವತಾರ ಕಥೆಗಳಲ್ಲಿ ಅಡಗಿವೆ. "ಸಾಧಕಾನಾಂ ಸಿದ್ಧರ್ಥಂ ಬ್ರಹ್ಮಣೋ ರೂಪಕಲ್ಪನಾ" ಎಂಬಂತೆ ನರಾಕಾರನಾಗಿ ಅವತರಿಸುತ್ತಾನೆ.

'ರಾ' ಶಬ್ದೋಚ್ಚಾರದಿಂದ ಅನಂತಜನ್ಮಗಳ ಪಾಪಗಳೆಲ್ಲವೂ ಹೊರಹೋಗುತ್ತವೆಂದು, 'ಮ' ಎಂದು ಉಚ್ಚರಿಸಿದ ಕೂಡಲೆ ತುಟಿಗಳು ಕವಾಟದಂತೆ ಮುಚ್ಚಿಕೊಂಡು ಅವುಪುನಃ ಒಳಗೆ ಪ್ರವೇಶಿಸುವುದಿಲ್ಲವೆಂದು ಮಹಾತ್ಮರು ಹೇಳುತ್ತಾರೆ. 'ರಾಮ' ನಾಮದಿಂದ ಕ್ರೂರಿಯಾದ ರತ್ನಾಕರನು ವಾಲ್ಮೀಕಿಯಾಗಿ ಆದಿಕಾವ್ಯ ರಾಮಾಯಣವನ್ನು ರಚಿಸಿ 'ಆದಿಕವಿ' ಎಂಬ ಕೀರ್ತಿಯನ್ನು ಗಳಿಸಿ ಅಮರನಾದ. ಪತಿತೆಯಾದ ಅಹಲ್ಯೆ 'ರಾಮ'ನ ಪಾವನಸ್ಪರ್ಶದಿಂದ ಪರಿಪೂತಳಾಗಿ ಪ್ರಾತಃಸ್ಮರಣೀಯರಲ್ಲಿ ಸೀತೆಗಿಂತ ಮೊದಲಿನ ಸ್ಥಾನವನ್ನು ಪಡೆದಿದ್ದಾಳೆ. ಗುಹನು









## ಧ್ವನಿವರ್ಧಕ ಹಾಗೂ ಕೊಡೆಗಳ ನೀಡಿಕೆ ಯೋಜನೆ

ವಿವಿಧ ದೇವಾಲಯಗಳಲ್ಲಿ ಬಳಸಲು ಶ್ವೇತ ಛತ್ರಗಳು ಹಾಗೂ ಧ್ವನಿವರ್ಧಕಗಳನ್ನು ರಿಯಾಯಿತಿ ದರಗಳಲ್ಲಿ ನೀಡಲು ತಿ.ತಿ.ದೇ. ಯೋಜಿಸಿದ್ದು ಇದಕ್ಕಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ ಆಯಾ ಜಿಲ್ಲೆಗಳ ಅಸಿಸ್ಟೆಂಟ್ ಕಮಿಷನರ್ (ದೇವಾದಾಯ ಇಲಾಖೆ) ಇವರ ಮೂಲಕ ತಮ್ಮ ಅಭ್ಯರ್ಥನೆಗಳನ್ನು ಕಳುಹಿಸಬೇಕು. ಜೊತೆಗೇ ಕೊಡೆಗಳಿಗಾಗಿ ರೂ. 900/- ಹಾಗೂ/ಅಥವಾ ಧ್ವನಿವರ್ಧಕಗಳಿಗಾಗಿ ರೂ. 3370/- ಗಳ ಡಿ. ಡಿ. ಯನ್ನು ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ -- ಇವರ ಹೆಸರಿನಲ್ಲಿರುವಂತೆ ಕಳುಹಿಸಬೇಕು.

ಅನುಸೂಚಿತ ಜಾತಿ, ಪಂಗಡಗಳ ಪ್ರಾಂತ್ಯಗಳಲ್ಲಿನ ದೇವಾಲಯಗಳಿಗೆ ಈ ರಿಯಾಯಿತಿ 90 ಶತಾಂಶವಾಗಿರುತ್ತವೆ.

ವಿವರಗಳಿಗಾಗಿ ಬರೆಯಿರಿ,

ಕಾರ್ಯನಿರ್ವಹಣಾಧಿಕಾರಿ,

ತಿ. ತಿ. ದೇ. ತಿರುಪತಿ.

ಶಬರಿ, ಜಟಾಯು, ಸುಗ್ರೀವ, ವಿಭೀಷಣ ಇನ್ನೂ ಎಷ್ಟೋ ಜನರು ರಾಮನಿಂದ ಪುನೀತರಾಗಿ ದಿವ್ಯತೆಯನ್ನು ಪಡೆದ ಕಥೆ ರಾಮಾಯಣದಲ್ಲಿಯೇ ಬರುತ್ತದೆ.

ಇನ್ನು ಕೃಷ್ಣನಾಮದ ಮಹಿಮೆಯೂ ಇಂತಹುದೇ. "ಹಲವು ಜನ್ಮದ ಪಾಪರಾಶಿಯ ತೊಳೆವ ಜಲವಿದು" ಎಂದು ಕುಮಾರವ್ಯಾಸರು ಹೇಳಿದರೆ, "ಜಿಹ್ವೇ! ಶ್ರೀಕೃಷ್ಣಮಂತ್ರಂ ಜಪ, ಜಪ ಸತತಂ ಜನ್ಮಸಾಫಲ್ಯಮಂತ್ರಂ" -- ಎಂದು ಕುಲಶೇಖರ ಆಳ್ವಾರರು ಉದ್ಗರಿಸಿದ್ದಾರೆ.

ಶ್ರೀರಾಮ, ಶ್ರೀಕೃಷ್ಣ ಭಕ್ತಿಯಲ್ಲಿ ತನ್ಮಯರಾಗಿ ಲೋಕವಿಖ್ಯಾತರಾದ ಭಕ್ತರ ಚರಿತ್ರೆಗಳಿಗೆ ಲೆಕ್ಕವಿಲ್ಲ. ತುಲಸೀದಾಸರು, ತ್ಯಾಗರಾಜರು, ರಾಮದಾಸರು ಪುರಂದರದಾಸರು, ಗೌರಾಂಗ, ಮೀರಾಬಾಯಿ, ಆಂಡಾಳ್ ಮುಂತಾದ ಅನೇಕರಿದ್ದಾರೆ. ರಾಮನಾಮ ಪಾಯಸಕ್ಕೆ ಕೃಷ್ಣನಾಮ ಸಕ್ಕರೆಯನ್ನು ಬೆರೆಸಿ ಉಂಡ ದಾಸವರೇಣ್ಯರು ಅದೆಷ್ಟು ಜನರೋ!

ಪ್ರಸ್ತುತ ಶ್ರೀರಾಮ, ಶ್ರೀಕೃಷ್ಣ ಅವತಾರಗಳಲ್ಲಿರುವ ಕೆಲವು ಹೋಲಿಕೆಗಳನ್ನು ವಿಶೇಷಗಳನ್ನು ಇಲ್ಲಿ ನೋಡೋಣ.

೧. ಶ್ರೀರಾಮನು ಮರ್ಯಾದಾಪುರುಷೋತ್ತಮನು. ಆದರೆ ಶ್ರೀಕೃಷ್ಣನು ಲೀಲಾಪುರುಷೋತ್ತಮನು.

೨. ಶ್ರೀರಾಮನು ಏಕಪತ್ನೀವ್ರತನು. ಶ್ರೀಕೃಷ್ಣನು ಬಹುಪತ್ನೀಸಹಿತನು.

೩. 'ರಾಮ' ಶಬ್ದದಲ್ಲಿನ ಎರಡಕ್ಷರಗಳೂ ಸರಳ, ಉಚ್ಚಾರಣೆಯೂ ಸುಲಭ. ಅಂತೆಯೇ ಸಂಸ್ಕೃತಭಾಷೆಯನ್ನು ಕಲಿಯುವವರಿಗೆ ಮೊದಲು 'ರಾಮ' ಶಬ್ದವನ್ನೇ ಕಲಿಸುತ್ತಾರೆ.

'ಕೃಷ್ಣ' ಶಬ್ದದಲ್ಲಿನ ಎರಡೂ ಅಕ್ಷರಗಳೂ ಸಂಯುಕ್ತಾಕ್ಷರಗಳು. ಉಚ್ಚಾರಣೆಯೂ ಕಷ್ಟ. ಆದುದರಿಂದಲೇ ಕೆಲವರು ಅದನ್ನು ಸರಿಯಾಗಿ ಉಚ್ಚರಿಸಲಾರದೆ ಅಪಭ್ರಂಶಮಾಡಿ ಕ್ರುಷ್ಣಾ, ಕುಷ್ಣಾ, ಕ್ರಿಷ್ಣಾ, ಕಿಟ್ನಾ ಕಿಷ್ಣಾ, ಕಿಟ್ಟಾ, ಕಿಟ್ಟೂ, ಕನ್ನಾ, ಕನ್ನಯ್ಯಾ, ಕಣ್ಣಾ, ಕಣ್ಣನ್ - ಹೀಗೆ ನಾನಾರೀತಿಯಾಗಿ ಹೇಳುತ್ತಾರೆ. ತಪ್ಪಾಗಿ ಹೇಳಿದರೂ ಹೇಳುವವರ ಹೃದಯದಲ್ಲಿನ ಭಕ್ತಿಯಿಂದಾಗಿ ಅದು ಮಧುರವಾಗಿಯೇ ಕೇಳಿಬರುತ್ತದೆ. ಮುದ್ದಾಗಿಯೂ, ಮನೋಹರವಾಗಿಯೂ ಇರುತ್ತದೆ. ಭಗವಂತನೂ ಸಹ ನಮ್ಮ ಶಬ್ದದೋಷವನ್ನು ನೋಡುವವನಲ್ಲ. "ಭಾವಗ್ರಾಹೀ ಜನಾರ್ದನಃ".

ರಾಮನ ವ್ಯವಹಾರವೂ ಸಹ ಸರಳವಾಗಿಯೂ ನೇರವಾಗಿಯೂ ಇರುತ್ತದೆ. ಒಳ್ಳೆಯವರೊಂದಿಗೂ, ಕೆಟ್ಟವರೊಂದಿಗೂ, ಮಿತ್ರರೊಂದಿಗೂ, ಶತ್ರುಗಳೊಂದಿಗೂ ಯಾವ ಮುಚ್ಚುಮರೆ ಇಲ್ಲದ ನಿಷ್ಕಪಟ ವ್ಯವಹಾರ. ಕೃಷ್ಣನು ಹಾಗಲ್ಲ. ಒಳ್ಳೆಯವರೊಂದಿಗೆ ಒಳ್ಳೆಯವನಾಗಿ, ಕೆಟ್ಟವರೊಂದಿಗೆ ಕೆಟ್ಟವನಾಗಿ, ಕಪಟಿಗಳೊಂದಿಗೆ ಕಪಟಿಯಾಗಿ ಯಾರಿಗೆ ತಕ್ಕಂತೆ ಅವರೊಂದಿಗೆ ವ್ಯವಹಾರ. "ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಂ" - ಎಂಬುದು ಕೃಷ್ಣನ ಪ್ರತಿಜ್ಞೆ.

೫. ಹೆಸರುಗಳ ಉಚ್ಚಾರಣೆಯಲ್ಲಿ ವ್ಯತ್ಯಾಸವಿರುವಂತೆಯೇ ಅವರ ವ್ಯಕ್ತಿತ್ವಗಳನ್ನು ತಿಳಿಯುವುದರಲ್ಲಿಯೂ ವ್ಯತ್ಯಾಸವಿದೆ. ರಾಮನನ್ನು ತಿಳಿಯುವುದು, ಅರ್ಥಮಾಡಿಕೊಳ್ಳುವದು ಬಹಳ ಸುಲಭ. ಆದರೆ ಕೃಷ್ಣನನ್ನು ಅರ್ಥಮಾಡಿಕೊಳ್ಳುವುದು ಬಹಳ ಕಷ್ಟ.

೬. ರಾಮನದು ಧರ್ಮಾವತಾರ. ಅದು ಬಹಿರಂಗವಾಗಿ ಕಾಣುತ್ತೆ. ಆದುದರಿಂದ ಸ್ಪಷ್ಟ; ಕೃಷ್ಣನದು ಜ್ಞಾನಾವತಾರ. ಅದು ಅಂತರಂಗದ ಸ್ವರೂಪಸ್ಥಿತಿ. ಹೊರಗೆ ಕಾಣಬರುವುದಿಲ್ಲ. ಸ್ವಸಂವೇದ್ಯವು. ಆದುದರಿಂದ ಸ್ವಲ್ಪ ಕ್ಲಿಷ್ಟ.

೭. ರಾಮನದು ಆಚರಣಾವತಾರ; ಕೃಷ್ಣನದು ಬೋಧನಾವತಾರ.

೮. "ರಾಮೋ ವಿಗ್ರಹವಾನ್ ಧರ್ಮಃ" - ಧರ್ಮಮೂರ್ತಿ. "ಕೃಷ್ಣಸ್ತು ಭಗವಾನ್ ಸ್ವಯಂ" - ಜ್ಞಾನಘನ, ಸಚ್ಚಿದಾನಂದ.

೯. ರಾಮನದು ಯೋಗಜೀವನ, ಕೃಷ್ಣನದು ಭೋಗಜೀವನ. ಆದರೂ ಶ್ರೀಕೃಷ್ಣನು ಯೋಗೇಶ್ವರ ನೆನಿಸಿಕೊಂಡಿದ್ದಾನೆ. ಅಂದರೆ ಯೋಗಿಗಳಿಗೂ ಯೋಗಿ - ಮಹಾಯೋಗಿ ಎಂದರ್ಥ.

೧೦. ಶ್ರೀರಾಮನು ಮಾಡಿದಂತೆ ಮಾಡು; ಶ್ರೀಕೃಷ್ಣನು ಹೇಳಿದಂತೆ ಮಾಡು ಎಂಬುದು ಮಹಾತ್ಮರ ಉಪದೇಶ. ಕೃಷ್ಣನಂತೆ ಮಾಡಲು ಹೋದರೆ ಪ್ರಮಾದವಾದೀತು. ರಾಮನನ್ನು ಅನುಕರಿಸು; ಕೃಷ್ಣನನ್ನು ಅನುಕರಿಸಬೇಡ. ಅರ್ಥಮಾಡಿಕೋ.

೧೧. ಶ್ರೀರಾಮನ ಅವತಾರವು ಮೊದಲನೆಯದು. ಅಂದರೆ, ಸಾಧನೆಯ ಪ್ರಾರಂಭವನ್ನು ಸೂಚಿಸುತ್ತದೆ. ಶ್ರೀಕೃಷ್ಣನ ಅವತಾರವು ನಂತರದ್ದು. ಅಂದರೆ ಅಂತಿಮಸ್ಥಿತಿಗೆ - ಸಿದ್ಧಾವಸ್ಥೆಗೆ ಸಂಕೇತ.

ರಾಮನು ದಾರಿ - ಕೃಷ್ಣನು ಗುರಿ

ರಾಮನು ನಿಯಮ - ಕೃಷ್ಣನು ಸಂಯಮ

೧೨. ಶ್ರೀರಾಮನು ರಾಜಮಹಲ್‌ನಲ್ಲಿ ಜನ್ಮಿಸಿದನು. ಶ್ರೀಕೃಷ್ಣನು ಜೈಲು - ಖಾನೆಯಲ್ಲಿ ಜನ್ಮಿಸಿದನು.

೧೩. ಶ್ರೀರಾಮನು ಸೂರ್ಯವಂಶದಲ್ಲಿ ಜನಿಸಿದರೆ, ಶ್ರೀಕೃಷ್ಣನು ಚಂದ್ರವಂಶದಲ್ಲಿ ಜನಿಸಿದ್ದಾನೆ.

೧೪. ಶ್ರೀರಾಮನು ಉತ್ತರಾಯಣದಲ್ಲಿ ಹುಟ್ಟಿದರೆ, ಶ್ರೀಕೃಷ್ಣನು ದಕ್ಷಿಣಾಯನದಲ್ಲಿ ಹುಟ್ಟಿದ್ದಾನೆ.

೧೫. ಶ್ರೀರಾಮನು ವಸಂತಋತುವಿನ ಚೈತ್ರ ಮಾಸದಲ್ಲಿ ಹುಟ್ಟಿದರೆ ಶ್ರೀಕೃಷ್ಣನು ವರ್ಷಋತುವಿನ ಶ್ರಾವಣ ಮಾಸದಲ್ಲಿ ಹುಟ್ಟಿದ್ದಾನೆ.

೧೬. ಶ್ರೀರಾಮನು ಶುಕ್ಲಪಕ್ಷದಲ್ಲಿ ಹುಟ್ಟಿದರೆ, ಶ್ರೀಕೃಷ್ಣನು ಕೃಷ್ಣಪಕ್ಷದಲ್ಲಿ ಹುಟ್ಟಿದ್ದಾನೆ.

೧೭. ಶ್ರೀರಾಮನು ನವಮಿಯದಿನ ಹುಟ್ಟಿದರೆ ಶ್ರೀಕೃಷ್ಣನು ಅಷ್ಟಮಿಯದಿನ ಹುಟ್ಟಿದ್ದಾನೆ. ದಕ್ಷಿಣಾಯನ, ಕೃಷ್ಣಪಕ್ಷ, ಅಷ್ಟಮಿ - ಇವುಗಳು ಜ್ಯೋತಿಷಿಗಳ ಲೆಕ್ಕದಲ್ಲಿ ಅಷ್ಟು ಶ್ರೇಷ್ಠವಲ್ಲ. ಅವರು ಅವಕ್ಕೆ ಅಪಕೀರ್ತಿಯನ್ನು ಹಚ್ಚಿ ಅಗೌರವಿಸುತ್ತಿದ್ದರು. ಆ ಅಪಕೀರ್ತಿಯನ್ನು ತೊಲಗಿಸಲು ಆ ಕಾಲದಲ್ಲಿ ತಾನೇ ಜನ್ಮಿಸಿದ್ದಾನೆ. ಭಗವತ್ ಸ್ವರೂಪವೇ ಆಗಿರುವ ಕಾಲದಲ್ಲಿ - ಇದು ಪವಿತ್ರ, ಇದು ಅಪವಿತ್ರ; ಇದು ಶ್ರೇಷ್ಠ, ಇದು ಕನಿಷ್ಠ - ಎಂಬ ವಿಭಾಗವನ್ನು ಮಾಡುವ ಮೂಢಮತಿಗಳಿಗೆ ಬುದ್ಧಿಯನ್ನು ಹೇಳಲು ಈ ರೀತಿಯ ಜನ್ಮಲೀಲೆ ಇರಬಹುದೇ? ಅಥವಾ ತನ್ನ ಅಖಂಡತೆಯನ್ನು ನಿರೂಪಿಸಲೋಸುಗ ವೇನೋ? ! ಗೀತೆಯಲ್ಲಿ "ಕಾಲೋಽಸ್ಮಿ", "ಕಾಲಃ ಕಲಯತಾಮಹಂ" ಎಂದು ಕಾಲವೇ ತನ್ನ ಸ್ವರೂಪವೆಂಬುದಾಗಿ ತಾನೇ ಸ್ವಯವಾಗಿ ಹೇಳಿರುವುದಂತೂ ಸತ್ಯ

೧೮. ರಾಮನು ಕೌಸಲ್ಯಾದಶರಥರಿಗೆ ಜ್ಯೇಷ್ಠಪುತ್ರನು, ಶ್ರೀಕೃಷ್ಣನು-ವಸುದೇವ ದೇವಕಿಯರ ಕನಿಷ್ಠ ಪುತ್ರನು. ಅಷ್ಟಮಗರ್ಭದಲ್ಲಿ ಜನಿಸಿದ್ದಾನೆ. ಏಳು ಭೂಮಿಕೆಗಳ ಮೇಲೆ ಇರುವ ಭೂಮಾನಂದರೂಪನೇ ತಾನೆಂದು ಅಥವಾ ಏಳುಲೋಕಗಳಿಗೆ ಅತೀತನಾದ ಅಲೋಕಸ್ವರೂಪನೆಂದು ಸಾರುವ ಸಂಕೇತವೇ? ಇರಲೂ ಬಹುದು.

೧೯. ರಾಮನ ಜನ್ಮನಕ್ಷತ್ರವು ಪುನರ್ವಸು, ಕೃಷ್ಣನ ಜನ್ಮನಕ್ಷತ್ರವು ರೋಹಿಣಿ.

೨೦. ರಾಮನು ಮಧ್ಯಾಹ್ನದ (ತಾಪದ) ಕಾಲದಲ್ಲಿ ಜನಿಸಿದರೆ ಕೃಷ್ಣನು ಮಧ್ಯರಾತ್ರಿಯ (ತಂಪಿನ) ಸಮಯದಲ್ಲಿ ಜನ್ಮಿಸಿದನು.

ಮಾನವರಿಗೆ ಮಧ್ಯಾಹ್ನದಲ್ಲಿ ಹಸಿವಿನಬಾಧೆ, ಮಧ್ಯರಾತ್ರಿಯಲ್ಲಿ ಕಾಮನಬಾಧೆ ಪೀಡಿಸುತ್ತವಂತೆ. ರಾಮನ ಮಧ್ಯಾಹ್ನ ಕಾಲ ಜನನವು ಜಿಹ್ವೇಂದ್ರಿಯ ನಿಗ್ರಹ ಸೂಚಕ. ಅಥವಾ ರಾಮನ ಧರ್ಮ ಮಾರ್ಗವನ್ನು ಅನುಸರಿಸಿದರೆ ಹಸಿವು ಬಾಯಾರಿಕೆಗಳ ಬಾಧೆ ಯಾರಿಗೂ ಇರಲಾರದೆಂಬ ಸಂಕೇತವು. ಅಂತೆಯೇ ರಾಮಾಯಣದಲ್ಲಿ ರಾಮಲಕ್ಷ್ಮಣರು ವಿಶ್ವಾಮಿತ್ರನಿಂದ "ಬಲ, ಅತಿಬಲ" ಎಂಬ ವಿದ್ಯೆಗಳನ್ನು ಕಲಿತು ಹಸಿವು ಬಾಯಾರಿಕೆಗಳನ್ನು ಜಯಸಿದ್ದರೆಂಬ ವೃತ್ತಾಂತವೂ ಇದೆ. ಶ್ರೀಕೃಷ್ಣನ ಮಧ್ಯರಾತ್ರಿಯ ಜನನ ಗುಹ್ಯೇಂದ್ರಿಯ ನಿಗ್ರಹಸೂಚಕವು. ಶ್ರೀಕೃಷ್ಣನ ಜ್ಞಾನವನ್ನು ಪಡೆದವರಿಗೆ ಕಾಮವು ಬಾಧಕವಾಗಲಾರದೆಂಬ ಸಂಕೇತವು. ಅಂತೆಯೇ ಶ್ರೀಕೃಷ್ಣನು ಸಾವಿರಾರು ಸುಂದರ ಗೋಪಿಯರ ಮಧ್ಯದಲ್ಲಿದ್ದರೂ ಸದಾ ಸಂಯಮಪೂರ್ಣನು. ಹೀಗೆ ರಾಮ, ಕೃಷ್ಣರ ದಿವ್ಯಸ್ಮರಣೆಯಿಂದ ಇಂದ್ರಿಯ ಸಂಯಮ ಸಿದ್ಧಿ ಸುಲಭವಾಗುವುದೆಂದು ಅನುಭವಜ್ಞರ ಅಭಿಪ್ರಾಯ.

ರಾಮ, ಕೃಷ್ಣರ ಜನ್ಮಕಾಲದ ವಿಷಯವಾಗಿ ಶ್ರೀವಿನೋಬಾಜೀಯವರು ಒಂದು ಸುಂದರ ವ್ಯಾಖ್ಯಾನವನ್ನು ನೀಡಿದ್ದಾರೆ. ರಾಮನು ಹುಟ್ಟಿದಾಗ ಎಲ್ಲಾದೇವತೆಗಳೂ ಬಂದು ಜನ್ಮೋತ್ಸವವನ್ನು ಸಂದರ್ಶಿಸಿ ಕೃತಾರ್ಥರಾದರಂತೆ. ಆದರೆ, ಅದು ಹಗಲಾದುದರಿಂದ ಚಂದ್ರನು ಬರಲಿಕ್ಕೆ ಆಗಲಿಲ್ಲಂತೆ. ಅವನದು "ನೈಟ್‌ಡ್ಯೂಟೀ" ಅಲ್ಲವೇ? ಬರಲಾರದುದಕ್ಕೆ ಅವನಿಗೆ ತುಂಬಾ ದುಃಖವಾಯಿತು. ಅವನ ಪರಿತಾಪವನ್ನು ನೋಡಿ ಭಗವಂತನು ಅಯ್ಯಾ! ಚಿಂತಿಸಬೇಡ. ಕೃಷ್ಣಾವತಾರದಲ್ಲಿ ನನ್ನ ಜನ್ಮವನ್ನು ನೀನು ನೋಡಬಹುದು. ಅಷ್ಟೇ ಅಲ್ಲ, ನಾನು ನಿನ್ನ ವಂಶದಲ್ಲೇ ಹುಟ್ಟುತ್ತೇನೆ ಎಂದು ವರದಾನ ನೀಡಿದ್ದನಂತೆ. ಆದುದರಿಂದಲೇ ಕೃಷ್ಣಪಕ್ಷದ ಅಷ್ಟಮಿಯ ದಿನರಾತ್ರಿ ಸರಿಯಾಗಿ ಚಂದ್ರೋದಯದ ವೇಳೆಗೆ ಶ್ರೀಕೃಷ್ಣನ ಜನನವಾಯಿತು. ರಾಮನು ಹಗಲಿನಲ್ಲಿ ಹುಟ್ಟಿದರೂ, ಸೂರ್ಯವಂಶದಲ್ಲಿ ಹುಟ್ಟಿದರೂ ಅವನು ಚಂದ್ರನ ತೃಪ್ತಿಗಾಗಿ ತನ್ನ ಹೆಸರಿನಲ್ಲೇ ಚಂದ್ರನನ್ನು ಸೇರಿಸಿಕೊಂಡು 'ರಾಮಚಂದ್ರ'ನಾಗಿದ್ದನು.

೨೧. ರಾಮನ ಜನ್ಮದಿನೋತ್ಸವವು ಅಯೋಧ್ಯಾನಗರದಲ್ಲಿ ವೈಭವೋಪೇತವಾಗಿ ವಿಜೃಂಭಣೆಯಿಂದ ನಡೆಯಿತು. ಶ್ರೀಕೃಷ್ಣನು ಅಷ್ಟಮಿಯದಿನ ಹುಟ್ಟಿದರೂ ಜನ್ಮದಿನೋತ್ಸವವು ಮಾತ್ರ ನವಮಿಯದಿನವೇ ನಡೆಯಿತು. ಕಂಸನ ಭಯದಿಂದಾಗಿ ಮರೆಯಲ್ಲಿ ಗುಟ್ಟಾಗಿ ಯಾವ ವಿಜೃಂಭಣೆಯೂ ಇಲ್ಲದೆ ನಂದಗೋಕುಲದಲ್ಲಿ ನಡೆಯಿತು.

೨೨. 'ರಾಮ' ಎಂದರೆ ರಮಿಸುವವನು. ಭಕ್ತರ ಯೋಗಿಗಳ ಹೃದಯದಲ್ಲಿ ಸದಾ ರಮಿಸುವವನು ಎಂದರ್ಥ. ಕೃಷ್ಣ ಎಂದರೆ ಆಕರ್ಷಿಸುವವನು ಸರ್ವಜೀವಿಗಳನ್ನು ತನ್ನ ಕಡೆ - ಸಮುದ್ರವು ನದಿಗಳನ್ನು ಆಕರ್ಷಿಸುವಂತೆ - ಆಕರ್ಷಿಸುವವನು. ಮಕ್ಕಳಿಗೂ, ಮಾತೆಯರಿಗೂ, ಸ್ತ್ರೀಯರಿಗೂ, ಪುರುಷರಿಗೂ, ಯುವತಿಯರಿಗೂ, ಯುವಕರಿಗೂ, ಪಂಡಿತರಿಗೂ, ಪಾಮರರಿಗೂ, ಪೆದ್ದರಿಗೂ, ವೃದ್ಧರಿಗೂ, ಸುಳ್ಳರಿಗೂ - ಕಳ್ಳರಿಗೂ, ಧಾರ್ಮಿಕರಿಗೂ - ರಾಜಕೀಯರಿಗೂ, ಸಂನ್ಯಾಸಿಗಳಿಗೂ - ಸಂಸಾರಿಗಳಿಗೂ, ಯೋಗಿಗಳಿಗೂ - ಭೋಗಿಗಳಿಗೂ, ದಾಂತರಿಗೂ, ವೇದಾಂತರಿಗೂ, ಕವಿಗಳಿಗೂ, ಗಾಯಕರಿಗೂ, ನರ್ತಕರಿಗೂ, ಪಶುಪಕ್ಷ್ಯಾದಿಗಳಿಗೂ, ಸಹಪ್ರಿಯನು, ಮನೋಹರನು ಆಗಿ ಎಲ್ಲರನ್ನೂ ಆಕರ್ಷಿಸುತ್ತಾನೆ. ರಾಮಕೃಷ್ಣರಿಬ್ಬರೂ ನೀಲಮೇಘಶ್ಯಾಮಲವರ್ಣದವರೇ.

೨೩. ರಾಮನು ಭೋಗಭಾಗ್ಯಗಳ ಮಧ್ಯದಲ್ಲಿ ರಾಜನಗರವಾದ ಅಯೋಧ್ಯೆಯ ಅರಮನೆಯಲ್ಲಿ ಸುಖವಾಗಿ ತಂದೆತಾಯಿಗಳ ಲಾಲನೆಯೊಂದಿಗೆ ಕೌಸಲ್ಯೆಯ ಮಡಿಲಲ್ಲಿ ತನ್ನ ಬಾಲ್ಯವನ್ನು ಕಳೆಯುತ್ತಾನೆ. ಆದರೆ ಶ್ರೀಕೃಷ್ಣನು ಹುಟ್ಟಿದಕೂಡಲೆ ತಂದೆತಾಯಿಗಳನ್ನು ಬಿಟ್ಟು ಅನಾಥನಂತೆ (Refugee) ನಂದಗೋಕುಲವನ್ನು ಸೇರಿ ಗೊಲ್ಲರ ಮಧ್ಯದಲ್ಲಿ ಯಶೋದೆಯ ಮಡಿಲಲ್ಲಿ ಬೆಳೆಯುತ್ತಾನೆ.

೨೪. ರಾಮನು ಬಾಲ್ಯವನ್ನು ನಗರದಲ್ಲಿ ಕಳೆದು ಯೌವನದಲ್ಲಿ ಕಾಡಿಗೆ ಹೋಗುತ್ತಾನೆ. ಆದರೆ, ಕೃಷ್ಣನು ಬಾಲ್ಯದಲ್ಲಿ ಹಸುಕರುಗಳ ಆರೈಕೆ ಮಾಡುತ್ತಾ ಕಾಡು ಮೇಡುಗಳಲ್ಲಿ ತಿರುಗಿ ಯೌವನದ ವೇಳೆಗೆ ನಗರವನ್ನು (ಮಧುರೆ) ಸೇರುತ್ತಾನೆ.

೨೫. ರಾಮನು ರಾಜಗುರುಗಳಾದ ವಶಿಷ್ಠಮಹರ್ಷಿಗಳಿಂದ ವಿದ್ಯೆಯನ್ನು ಕಲಿಯುತ್ತಾನೆ. ನಂತರ ವಿಶ್ವಾಮಿತ್ರರಿಂದಲೂ ಕಲಿಯುತ್ತಾನೆ. ಶ್ರೀಕೃಷ್ಣನು ಸಾಂದೀಪನೀಮುನಿಗಳ ಸೇವೆಯನ್ನು ಮಾಡಿ ವಿದ್ಯಾಭ್ಯಾಸವನ್ನು ಮಾಡುತ್ತಾನೆ.

೨೬. ಶ್ರೀರಾಮನು ತಂದೆಯನ್ನು ಅಸತ್ಯವಾದಿಯಾಗದಂತೆ ರಕ್ಷಿಸಲು ಕಾಡಿಗೆ ಹೋಗುತ್ತಾನೆ. ಶ್ರೀಕೃಷ್ಣನು ಮಧುರಾನಗರಕ್ಕೆ ಬಂದು ಕಂಸನನ್ನು ಕೊಂದು ತಂದೆತಾಯಿಗಳನ್ನು ಬಂಧನದಿಂದ ಬಿಡಿಸುತ್ತಾನೆ. ಇಬ್ಬರೂ ಮಾತಾಪಿತೃಭಕ್ತಿಪರಾಯಣರೇ.

೨೭. ರಾಮನು ಭರತನ ಪ್ರಾರ್ಥನೆಯಂತೆ ತನ್ನ ರಾಜತ್ವದ ಕುರುಹಾಗಿ ಪಾದುಕೆಗಳನ್ನು

ಕೊಟ್ಟು ಕಳಿಸಿ ತಾನು ಅರಣ್ಯವಾಸವನ್ನು ಮುಂದುವರಿಸುತ್ತಾನೆ. ಶ್ರೀಕೃಷ್ಣನು ರಾಧೆಯ ಬೇಡಿಕೆಯಂತೆ ಪ್ರೇಮದ ಚಿಹ್ನೆಯಾಗಿ ತನ್ನ ಕೊಳಲನ್ನು ಕೊಟ್ಟು, ದುಷ್ಟಶಿಕ್ಷಣ ಶಿಷ್ಟರಕ್ಷಣೆಗಾಗಿ ಮಧುರಾ ನಗರಕ್ಕೆ ಬರುತ್ತಾನೆ.

೨೮. ಅರಣ್ಯವಾಸಕ್ಕೆ ಹೊರಡುವಾಗ ರಾಮನು ತನ್ನ ಮಡದಿಯಾದ ಸೀತೆಯನ್ನು, ಲಕ್ಷ್ಮಣ ಸೋದರನನ್ನು ತನ್ನೊಂದಿಗೆ ಕರೆದುಕೊಂಡು ಹೋಗುತ್ತಾನೆ. ಕೃಷ್ಣನು ತನ್ನನ್ನು ಪ್ರೀತಿಸುತ್ತಿದ್ದ ಗೋಪಿಯರೆಲ್ಲರನ್ನೂ ಬೃಂದಾವನದಲ್ಲಿಯೇ ಬಿಟ್ಟು ಅಣ್ಣ ಬಲರಾಮನೊಂದಿಗೆ ಮಧುರಾನಗರಕ್ಕೆ ಹೊರಡುತ್ತಾನೆ.

೨೯. ರಾಮನು ತಾನೇ ಸ್ವಯವಾಗಿ ಅರಣ್ಯವಾಸವನ್ನು ಮಾಡುತ್ತಾನೆ. ಅಲ್ಲಿ ಋಷಿಮುನಿಗಳಿಗೆ ತೊಂದರೆಯನ್ನು ಕೊಡುವ ರಾಕ್ಷಸರನ್ನು ಕೊಂದು ಅವರನ್ನು ಕಾಪಾಡುತ್ತಾನೆ. ಕೃಷ್ಣನು ಅರಣ್ಯವಾಸವನ್ನು ಮಾಡುವುದಿಲ್ಲ. ಆದರೆ, ಅರಣ್ಯದಲ್ಲಿ ಸಂಕಟಪಡುತ್ತಿರುವ ಪಾಂಡವರಿಗೆ ಕಷ್ಟದಲ್ಲಿ ನೆರವಾಗುತ್ತಾನೆ. ಮಾರ್ಗದರ್ಶಕನಾಗುತ್ತಾನೆ.

೩೦. ರಾಮನು ಕೊನೆಗೆ ತಾನೇ ರಾಜನಾಗಿ ರಾಜ್ಯವನ್ನಾಳುತ್ತಾನೆ. ಕೃಷ್ಣನಾದರೋ ರಾಜ್ಯಗಳು ದೊರೆತರೂ ತಾನು ಸಿಂಹಾಸನವನ್ನು ಅಧಿರೋಹಿಸದೆ ಯೋಗ್ಯರಾದವರನ್ನು ಕುಳ್ಳಿರಿಸಿ ಪಟ್ಟವನ್ನು ಕಟ್ಟುತ್ತಾನೆ. “RAMA IS A KING; BUT KRISHNA IS A KING - MAKER”

೩೧. ರಾಮಾವತಾರದಲ್ಲಿ ಆದಿಶೇಷನು ತಮ್ಮನಾಗಿ (ಲಕ್ಷ್ಮಣನಾಗಿ) ಹುಟ್ಟಿ ರಾಮನಿಗೆ ಸೇವೆಗಳನ್ನು ಮಾಡುತ್ತಾನೆ. ಕೃಷ್ಣಾವತಾರದಲ್ಲಿ ಆದಿಶೇಷನು ಅಣ್ಣನಾಗಿ (ಬಲರಾಮನಾಗಿ) ಹುಟ್ಟಿ ಕೃಷ್ಣನಿಂದ ಸೇವೆಗಳನ್ನು ಮಾಡಿಸಿಕೊಳ್ಳುತ್ತಾನೆ. ಕೃಷ್ಣನನ್ನು ಆಜ್ಞಾಪಿಸುತ್ತಾನೆ. ಹಿಂದಿನ ಬಾಕೀ ಸಲ್ಲಬೇಕಲ್ಲವೇ.

೩೨. ರಾಮಾವತಾರದಲ್ಲಿ ಸೂರ್ಯಪುತ್ರನಾದ ಸುಗ್ರೀವನನ್ನು ರಕ್ಷಿಸಿ, ಇಂದ್ರಪುತ್ರನಾದ ವಾಲಿಯನ್ನು ಕೊಲ್ಲುತ್ತಾನೆ. ಕೃಷ್ಣಾವತಾರದಲ್ಲಿ ಇಂದ್ರಪುತ್ರನಾದ ಅರ್ಜುನನನ್ನು ರಕ್ಷಿಸುತ್ತಾ ಸೂರ್ಯಪುತ್ರನಾದ ಕರ್ಣನನ್ನು ಕೊಲ್ಲಿಸುತ್ತಾನೆ.

೩೩. ರಾಮಾವತಾರದಲ್ಲಿ ಕೋದಂಡವೆಂಬ ಬಿಲ್ಲನ್ನು ಸದಾ ಧರಿಸಿಕೊಂಡು ದುಷ್ಟಶಿಕ್ಷಣ ಶಿಷ್ಟರಕ್ಷಣವನ್ನು ಮಾಡಿ 'ಕೋದಂಡರಾಮ'ನೆಂದು ಕರೆಯಿಸಿಕೊಳ್ಳುತ್ತಾನೆ. ಶ್ರೀಕೃಷ್ಣನು ಬಾಲ್ಯದಲ್ಲಿ ಕೊಳಲನ್ನು ಹಿಡಿದು ವೇಣುನಾದದಿಂದ ಗೋಪಗೋಪಿಯರ, ಪಶುಪಕ್ಷಿಗಳ ಮನಸೆಳೆದು 'ವಂಶೀಮೋಹನ', 'ಮುರಳೀಧರ' ಎನಿಸುತ್ತಾನೆ. ನಂತರ ಸುದರ್ಶನ ಚಕ್ರಧಾರಿಯಾಗಿ 'ಚಕ್ರಿ' ಎಂಬ ಹೆಸರನ್ನು ಪಡೆದರೂ ಅದನ್ನು ಕೇವಲ ಒಂದೆರಡು ಸಲ ಮಾತ್ರವಲ್ಲದೇ ಹೆಚ್ಚಾಗಿ ಬಳಸಲಿಲ್ಲ.

೩೪. ರಾಮಾವತಾರದಲ್ಲಿ ಮೊಟ್ಟಮೊದಲು ವಿಶ್ವಾಮಿತ್ರನ ಪ್ರೇರಣೆಯಂತೆ ತಾಟಕಿ (ರಾಕ್ಷಸಸ್ತ್ರೀ)ಯನ್ನು ಒಂದೇ ಬಾಣದಿಂದ ಕೊಲ್ಲುತ್ತಾನೆ. ಕೃಷ್ಣಾವತಾರದಲ್ಲಿ ಪೂತನೆಯ ವಿಷಸ್ತನ್ಯವನ್ನು ಪಾನ ಮಾಡಿ ಅವಳನ್ನು ಕೊಲ್ಲುತ್ತಾನೆ. ಒಟ್ಟಿನಲ್ಲಿ ಇಬ್ಬರೂ ಸ್ತ್ರೀಹತ್ಯೆಯೊಂದಿಗೆ ತಮ್ಮ ದುಷ್ಟ ಶಿಕ್ಷಣವನ್ನು ಪ್ರಾರಂಭಿಸಿದರು.

೩೫. ರಾಮನು ಶಿವಧನುಸ್ಸನ್ನು ಎತ್ತದೇಕೆಂಬ ವಿಧಿಯನ್ನು ಪಾಲಿಸಿ ಅದನ್ನು ಭಂಗಗೊಳಿಸಿ ಪಣವಾಗಿಟ್ಟಿದ್ದ ಸೀತೆಯನ್ನು ತಾನೇ ಗೆದ್ದು ಮದುವೆ ಆಗುತ್ತಾನೆ. ಆದರೆ ಶ್ರೀಕೃಷ್ಣನು ತಾನು ಬಯಸದೆಯೇ ತನ್ನನ್ನೇ ವರಿಸಿ ಬಂದವರೆಲ್ಲರನ್ನೂ ಮದುವೆ ಆಗುತ್ತಾನೆ.

೩೬. ರಾಮಾವತಾರದಲ್ಲಿ ತನ್ನನ್ನು ಕಾಮಿಸಿಬಂದ ಶೂರ್ಪಣಖಿಯನ್ನು ತಮಾಷೆಮಾಡಿ

ಅವಳ ಕಿವಿ ಮೂಗುಗಳನ್ನು ಕತ್ತರಿಸುವಂತೆ ಮಾಡಿ ಅವಳನ್ನು ಕುರೂಪಗೊಳಿಸಿ ಅವಳಲ್ಲಿ ಸೇಡಿನ ಭಾವ ಬೆಳೆಯುವಂತೆ ಮಾಡುತ್ತಾನೆ. ಕೃಷ್ಣಾವತಾರದಲ್ಲಿ ಕುರೂಪಿಯಾಗಿದ್ದ ಕುಬ್ಜೆ (ತ್ರಿವಕ್ರೆ) ಯ ಕಾಮನೆಯನ್ನು ಪೂರೈಸಿ ಅವಳನ್ನು ರೂಪವತಿಯನ್ನಾಗಿ ಮಾಡಿ ಅವಳಲ್ಲಿ ಪ್ರೇಮದ ಚಿಲುಮೆ ಉಕ್ಕಿ ಹರಿಯುವಂತೆ ಮಾಡುತ್ತಾನೆ.

೩೭. ರಾಮಾವತಾರದಲ್ಲಿ ಒಬ್ಬ ಅಗಸನ ಅವಹೇಳನೆಯ ಚುಚ್ಚು ಮಾತಿಗೆ ಮಾನ್ಯತೆಯನ್ನು ನೀಡಿ ಸೀತೆಯನ್ನು ಕಾಡಿಗೆ ಕಳಿಸುತ್ತಾನೆ. ತಾನೂ ಶೋಕದಲ್ಲಿ ಮುಳುಗುತ್ತಾನೆ. ಕೃಷ್ಣಾವತಾರದಲ್ಲಿ ಮಧುರಾನಗರದಲ್ಲಿ ಎದುರಾದ ಕಂಸನ ಅಗಸನನ್ನು ಶಿಕ್ಷಿಸುತ್ತಾನೆ. ಅವನಿಂದ ರಾಜ ಪೋಷಾಕುಗಳನ್ನು ಕಸಿದುಕೊಂಡು ಧರಿಸಿಕೊಂಡು ಮೆರೆಯುತ್ತಾನೆ.

೩೮. ರಾಮಾವತಾರದಲ್ಲಿ ಶಬರಿ ಕೊಟ್ಟ ಎಂಜಲ ಬೋರೆಹಣ್ಣುಗಳನ್ನು ಆಪ್ಯಾಯಮಾನವಾಗಿ ತಿನ್ನುತ್ತಾನೆ. ಕೃಷ್ಣಾವತಾರದಲ್ಲಿ ಗೋಪಬಾಲರ ಬುತ್ತಿಗಳಿಂದ ಅವರ ಎಂಜಲು ತಿಂದು ನಲಿಯುತ್ತಾನೆ.

೩೯. ರಾಮಾವತಾರದಲ್ಲಿ ಯುದ್ಧಸಮಯದಲ್ಲಿ ರಾಮನು ಸರ್ಪಾಸ್ತ್ರದಿಂದ ಬಂಧಿತನಾಗುತ್ತಾನೆ. ಕೊನೆಗೆ ಗರುಡವಾಹನನಾದ ತನ್ನ ಸ್ವರೂಪವನ್ನು ಸ್ಮರಿಸಿ ಅದರಿಂದ ಬಿಡುಗಡೆಯನ್ನು ಹೊಂದುತ್ತಾನೆ. ಕೃಷ್ಣಾವತಾರದಲ್ಲಿ ಅಘಾಸುರನೆಂಬ ಸರ್ಪದ ಗರ್ಭದಲ್ಲಿ ಪ್ರವೇಶಿಸಿ ಅದನ್ನು ಸೀಳಿ ಕೊಲ್ಲುತ್ತಾನೆ. ಯಮುನೆಯ ಮಡುವಿನಲ್ಲಿ ವಾಸವಾಗಿದ್ದ ಕಾಳೀಯನೆಂಬ ಸಾವಿರ ಹೆಡೆಗಳ ಭಯಂಕರ ವಿಷಸರ್ಪದ ಹೆಡೆಗಳ ಮೇಲೆ ನೃತ್ಯವನ್ನು ಮಾಡಿ ಅದರ ಮದವನ್ನು ಅಡಗಿಸುತ್ತಾನೆ.

೪೦. ರಾಮಾವತಾರದಲ್ಲಿ ಸೀತಾವಿಯೋಗದಿಂದಲೂ, ಲಕ್ಷ್ಮಣನ ಮೂರ್ಛೆಯಿಂದಲೂ ಶೋಕಾಕುಲನಾಗುತ್ತಾನೆ. ಕೃಷ್ಣಾವತಾರದಲ್ಲಿ ೫೬ ಕೋಟಿ ಯಾದವ ಬಂಧುಗಳು, ತನ್ನ ಮಕ್ಕಳು, ಮೊಮ್ಮಕ್ಕಳು ತನ್ನ ಕಣ್ಣುಮುಂದೆಯೇ ಹತರಾದರೂ, ತಾನೇ ಕಟ್ಟಿದ ದ್ವಾರಕಾನಗರವು ಸಮುದ್ರದಲ್ಲಿ ಮುಳುಗಿ ಹೋದರೂ ಕಿಂಚಿತ್ತೂ ವಿಚಲಿತನಾಗದೆ ನಿಶ್ಚಲನಾಗಿಯೂ ನಿರ್ವಿಕಾರನಾಗಿಯೂ ಇರುತ್ತಾನೆ.

೪೧. ರಾಮನ ಮುಖದಲ್ಲಿ ಅನೇಕ ಸಂದರ್ಭಗಳಲ್ಲಿ ವಿಷಾದದ ಕಾರ್ಮೋಡಗಳು ಕಾಣಿಸುತ್ತಿದ್ದವು ಶತ್ರುನಿಗ್ರಹದ ವಿಷಯದಲ್ಲಿ ರೋಷವೂ, ಛಲವೂ ಕಂಡುಬರುತ್ತಿತ್ತು. ಆದರೆ ಶ್ರೀಕೃಷ್ಣನ ಮುಖದಲ್ಲಿ ಸದಾ ಮಂದಹಾಸದ ಚಂದ್ರಿಕೆ ವಿರಾಜಿಸುತ್ತಿತ್ತು. ವಿಷಾದ, ಕ್ರೋಧಗಳ ಛಾಯೆ ಎಂದೆಂದೂ ಇರಲಿಲ್ಲ.

೪೨. ರಾಮಾವತಾರದಲ್ಲಿ ತಾನು ತಾರುಣ್ಯದ ಹೊಸಿಲಲ್ಲಿ ಕಾಲಿಡುವಾಗಲೇ ವಿಷಾದ ಗ್ರಸ್ತನಾಗುತ್ತಾನೆ. ಆ ಸಂದರ್ಭದಲ್ಲಿ ಗುರುಗಳಾದ ವಶಿಷ್ಠರ ಮುಖತಃ ಆತ್ಮಬೋಧೆಯನ್ನು ಕೇಳಿ ಕರ್ತವ್ಯಪರಾಯಣನಾಗುತ್ತಾನೆ. (ಅದೇ ವಶಿಷ್ಠಗೀತೆ, ಯೋಗವಾಶಿಷ್ಠ, ವಾಶಿಷ್ಠರಾಮಾಯಣ ಎಂಬ ಹೆಸರುಗಳಿಂದ ಕರೆಯಲ್ಪಡುತ್ತಿದೆ.) ಕೃಷ್ಣಾವತಾರದಲ್ಲಿ ವಿಷಾದಗ್ರಸ್ತನಾಗಿ ಕರ್ತವ್ಯವಿಮುಖನಾಗಿದ್ದ ಅರ್ಜುನನಿಗೆ ಆತ್ಮಜ್ಞಾನವನ್ನು ಬೋಧಿಸಿ ಶೋಕ ಮೋಹಗಳಿಂದ ಮುಕ್ತಗೊಳಿಸಿದ್ದನು. ಅದೇ 'ಶ್ರೀಮದ್ಭಗವದ್ಗೀತೆ' ಯಾಗಿ ಪ್ರಸಿದ್ಧವಾಗಿದೆ.

೪೩. ರಾಮನು ಉತ್ತಮ ಶಿಷ್ಯನಾಗಿಯು, ಆದರ್ಶಪುತ್ರನು, ಆದರ್ಶ ಸಹೋದರನು, ಆದರ್ಶ ಸ್ನೇಹಿತನು, ಆದರ್ಶ ರಾಜನು ಆಗಿ ರಾರಾಜಿಸಿದನು. ಶ್ರೀಕೃಷ್ಣನು ಆದರ್ಶ ಗುರುವಾಗಿ ವಿರಾಜಿಸಿದನು.

೪೪. ರಾಮನು ತಾನು ಭಗವಂತನೆಂದು ಎಲ್ಲಿಯೂ ಹೇಳಿಕೊಳ್ಳಲಿಲ್ಲ. "ನಾನು ದಶರಥ ಪುತ್ರನು, ಮನುಷ್ಯನು" - ಎಂದೇ ಹೇಳಿಕೊಂಡಿದ್ದಾನೆ. ಕೃಷ್ಣನು ಮಾತ್ರ ತಾನು ಭಗವಂತನೆಂದೂ ಪುರುಷೋತ್ತಮನೆಂದೂ ಸ್ಪಷ್ಟವಾಗಿ, ಬಹಿರಂಗವಾಗಿಯೇ ಹೇಳಿಕೊಂಡಿದ್ದಾನೆ.

೪೫. ರಾಮನು ಯಾವ ಅಮಾನುಷಸಿದ್ಧಿಗಳನ್ನೂ ಪ್ರದರ್ಶಿಸದೆ ಸಾಮಾನ್ಯ ಆದರ್ಶ ಮಾನವನಾಗಿ ವ್ಯವಹರಿಸಿದ್ದಾನೆ. ಕೃಷ್ಣನು ಅನೇಕ ಅತಿಮಾನುಷ ಸಿದ್ಧಿಗಳನ್ನು ತೋರಿ ಪವಾಡ ಪುರುಷನಂತೆಯು, ಮಹಾಯೋಗಿಯಂತೆಯೂ, ಕೆಲವರಿಗೆ ಐಂದ್ರಜಾಲಿಕನಂತೆಯು ಕಂಡುಬಂದಿದ್ದಾನೆ.

೪೬. ರಾಮನು ತನ್ನ ಧರ್ಮ ಸಂಸ್ಥಾಪನಾಕಾರ್ಯಕ್ಕೆ ವಾನರ, ಭಲ್ಲೂಕಗಳನ್ನು ಬಳಸಿಕೊಂಡರೆ, ಕೃಷ್ಣನು ಯಾದವ, ಪಾಂಡವರನ್ನು ಉಪಯೋಗಿಸಿಕೊಂಡಿದ್ದಾನೆ.

೪೭. ರಾಮನಿಗೆ ಭಕ್ತಶಿಖಾಮಣಿಯಾದ ಆಂಜನೇಯನು ಭಂಟನಾಗಿ ದೊರೆತಿದ್ದಾನೆ. ಯುದ್ಧದಲ್ಲಿ ರಾಮನು ರಥವನ್ನು ಕಳೆದುಕೊಂಡಾಗ ಆಂಜನೇಯನೇ ರಾಮನಿಗೆ ರಥವಾಗಿ ಹೊತ್ತಿದ್ದಾನೆ. ಕೃಷ್ಣಾವತಾರದಲ್ಲಿ ತನ್ನ ಪ್ರೇಮಕ್ಕೆ ಪಾತ್ರನಾದ ಕಪಿಧ್ವಜನಿಗೆ ಯುದ್ಧದಲ್ಲಿ ಕೃಷ್ಣನೇ ಸಾರಥಿಯಾಗಿ ರಥವನ್ನು ನಡೆಸಿದ್ದಾನೆ.

೪೮. ರಾಮನು ಯುದ್ಧಾನಂತರ ತನಗಾಗಿ ಪ್ರಾಣಕ್ಕೇ ಅಂಜದೆ ಹೋರಾಡಿ ಮೃತಪ್ರಾಯರಾಗಿದ್ದ ವಾನರ ಭಲ್ಲೂಕ ಸೇನೆಗಳನ್ನು ಅಮೃತಮಯವಾದ ಪ್ರೇಮಾರ್ದ್ರದೃಷ್ಟಿಯಿಂದ ನೋಡಿ ಅವರನ್ನು ಪುನಶ್ಚೇತನರನ್ನಾಗಿ ಮಾಡಿದನು. ಕೃಷ್ಣನು ಯುದ್ಧದಲ್ಲಿ ಶತ್ರುಪಕ್ಷದ ವೀರರನ್ನು ತನ್ನ ಸಂಮೋಹಕ ದೃಷ್ಟಿಯಿಂದಲೇ ಪರವಶರನ್ನಾಗಿಯೂ, ನಿರ್ವೀರ್ಯರನ್ನಾಗಿಯೂ ಮಾಡಿ ಕೌರವರ ಸೋಲಿಗೆ ಕಾರಣನಾದನು.

೪೯. ರಾಮನು ಜೀವಂತವಾಗಿರುವಾಗಲೇ ರಾವಣನು ಸೀತೆಯನ್ನು ಅಪಹರಿಸಿಕೊಂಡು ಹೋದನು. ರಾಮನು ಯುದ್ಧದಲ್ಲಿ ರಾವಣನನ್ನು ಕೊಂದು ಸೀತೆಯನ್ನು ಬಿಡಿಸಿಕೊಂಡು ಬಂದನು. ಕೃಷ್ಣಾವತಾರದಲ್ಲಿ ಕೃಷ್ಣನ ನಿರ್ಯಾಣಾನಂತರ ಕೃಷ್ಣ ಪತ್ನಿಯರನ್ನು ದರೋಡೆಕೋರರು ಅಪಹರಿಸಿಕೊಂಡು ಹೋಗುತ್ತಾರೆ. ಅವರ ರಕ್ಷಣೆಯ ಭಾರವನ್ನು ವಹಿಸಿಕೊಂಡಿದ್ದ ಅರ್ಜುನನು ಸಹ ಅವರನ್ನು ರಕ್ಷಿಸಲಾರದವನಾಗುತ್ತಾನೆ.

೫೦. ಗರ್ಭವತಿಯಾಗಿದ್ದ ಸೀತೆ - ತಾನು ಕಾಡಿಗೆ ಹೋಗಿ ಅಲ್ಲಿನ ಪ್ರಕೃತಿ ಸೌಂದರ್ಯವನ್ನು ಋಷಿಮುನಿಗಳ ಪರ್ಣಕುಟೀರಗಳನ್ನು ನೋಡಬೇಕೆಂದು ಬಯಸುತ್ತಾಳೆ. ರಾಮನು ಅದಕ್ಕೆ ಸಮ್ಮತಿಸಿ ಕಾಡಿಗೆ ಕಳಿಸುತ್ತಾನಾದರೂ ಸೀತೆಗೆ ಸುಖಕ್ಕೆ ಬದಲು ದುಃಖವೇ ಎದುರಾಗಿ ಕಾಡಿನಲ್ಲಿ ರೋದಿಸುತ್ತಾ, ಕೊನೆಗೆ ವಾಲ್ಮೀಕಿಯ ಆಶ್ರಮವನ್ನು ಸೇರುತ್ತಾಳೆ. ಸೀತೆಯ ಬೇಡಿಕೆ - ರಾಮನವರವು ಈರೀತಿ ವಿಷಮವಾಗಿ ಪರಿಣಮಿಸಿದವು

ಕೃಷ್ಣಾವತಾರದಲ್ಲಿ ಸತ್ಯಭಾಮೆ ದೇವಲೋಕದ ಪಾರಿಜಾತ ವೃಕ್ಷವನ್ನು ಬೇಡಿದರೆ ಕೃಷ್ಣನು ಅದನ್ನು ತಂದು ಅವಳಮನೆಯ ಮುಂದೆಯೇ ನೆಡುತ್ತಾನೆ. ಆದರೆ ಅದರ ಹೂವುಗಳು ಮಾತ್ರ ಅವಳಿಗೆ ದಕ್ಕದೆ ರುಕ್ಮಿಣಿಯ ಅಂಗಳದಲ್ಲಿ ಬಿದ್ದು ರುಕ್ಮಿಣಿಗೆ ಸಿಗುತ್ತಿದ್ದವು. ಇಲ್ಲಿಯೂ ಸತ್ಯಭಾಮೆಯ ಬೇಡಿಕೆ, ಶ್ರೀಕೃಷ್ಣನ ಕೊಡುಗೆ ಅವಳಿಗೆ ಉಪಯೋಗವಾಗದೆ ರುಕ್ಮಿಣಿಯ ಮೇಲೆ ಮತ್ತಷ್ಟು ಅಸೂಯೆಯೇ ಬೆಳೆಯುವಂತೆ ಆಯಿತು.

೫೧. ಕೃಷ್ಣನ ಕಾಲಿನ ಹೆಬ್ಬೆರಳು ಒಂದು ಪಕ್ಷಿಯ ತಲೆಯಂತೆ ಕಂಡ ಒಬ್ಬ ಬೇಡನು ಮರೆಯಿಂದ ಬಾಣವನ್ನು ಹೊಡೆದನು. ಈ ನಿಮಿತ್ತದಿಂದ ಕೃಷ್ಣನ ದೇಹತ್ಯಾಗದೊಂದಿಗೆ ಅವತಾರ ಪರಿಸಮಾಪ್ತಿ ಆಯಿತು. (ರಾಮಾವತಾರದಲ್ಲಿ ರಾಮನು ಗಿಡದ ಮರೆಯಲ್ಲಿ ನಿಂತು ವಾಲಿಯನ್ನು ಬಾಣದಿಂದ ಹೊಡೆದು ಕೊಂದಿದ್ದನು. ಈ ವಾಲಿಯೇ ಈ ಬೇಡನಾಗಿ ಜನ್ಮಿಸಿ ಹೀಗೆ ಮಾಡಿದನೆಂದು ಹೇಳಲಾಗಿದೆ. ಪಶ್ಚಾತ್ತಾಪ ಪಡುತ್ತಿದ್ದ ಬೇಡನಿಗೆ ಕೃಷ್ಣನೇ ಈ ವಿಷಯವನ್ನು ಹೇಳಿ ಸಾಂತ್ವನ ಗೊಳಿಸುತ್ತಾನೆ.) ಶ್ರೀರಾಮನು ಸರಯೂನದಿಯಲ್ಲಿ ಐಕ್ಯವಾಗಿ ತನ್ನ

ಅವತಾರವನ್ನು ಪರಿಸಮಾಪ್ತಿಗೊಳಿಸಿ ಪರಮಧಾಮವನ್ನು ಸೇರಿದನೆಂದು ಹೇಳಲಾಗಿದೆ.

ಮಹಾಕ್ರೂರಿಯಾಗಿ ಅನೇಕ ಜನರ ತಲೆಗಳನ್ನು ಕತ್ತರಿಸಿ ದೋಚಿಕೊಳ್ಳುತ್ತಿದ್ದ ನಿರ್ದಯನಾದ ರತ್ನಾಕರನು ನಾರದರ ಉಪದೇಶದಿಂದ 'ರಾಮ' ಎಂಬ ಎರಡಕ್ಷರಗಳನ್ನೂ ಸರಿಯಾಗಿ ಉಚ್ಚರಿಸಲಾರದೆ ತಿರುಗಿಸಿ 'ಮರಾ' 'ಮರಾ' ಎಂದು ಜಪಿಸಿ, ತಪಿಸಿ, ಪುನೀತನಾಗಿ ಕೊನೆಗೆ ಒಂದು ಪಕ್ಷಿಯಸಾವನ್ನೂ ಕೂಡ ನೋಡಿ ಸಹಿಸಲಾರದಷ್ಟು ದಯಾಮಯನಾಗಿ ಪರಿವರ್ತನೆಯನ್ನು ಹೊಂದಿ ಆದಿ ಕಾವ್ಯವೆನಿಸಿದ ರಾಮಕಥೆಯನ್ನು ೨೪ ಸಾವಿರ ಶ್ಲೋಕಗಳಿಂದ ಕೂಡಿದ ಏಳು ಕಾಂಡಗಳಾಗಿ ರಚಿಸಿ ಲೋಕಕ್ಕೆ ಅನುಗ್ರಹಿಸಿದ್ದಾನೆ.

ಪರಾಶರ, ಸತ್ಯವತಿಯರಿಗೆ ದ್ವೀಪದಲ್ಲಿ ಜನ್ಮಿಸಿ ದ್ವೈಪಾಯನನೆಂದು ಕರೆಯಲ್ಪಟ್ಟ ವ್ಯಾಸನು ಬಾಲ್ಯದಿಂದಲೇ ತಪೋನಿರತನಾಗಿ ಲೋಕೋದ್ಧಾರಕ್ಕಾಗಿ ಅನೇಕ ಪುರಾಣಗಳನ್ನು ಪಂಚಮ ವೇದವೆನಿಸಿದ ಮಹಾಭಾರತವನ್ನುಬ್ರಹ್ಮಸೂತ್ರಾದಿ ವೇದಾಂತಗ್ರಂಥಗಳನ್ನು ರಚಿಸಿ ಇನ್ನೂ ತೃಪ್ತಿಯನ್ನು ಹೊಂದದೆ ಅಸಮಾಧಾನವಾಗಿಯೇ ಇದ್ದಾಗ ನಾರದರ ಉಪದೇಶದಿಂದಲೇ ೧೮ ಸಾವಿರ ಶ್ಲೋಕಗಳಿಂದ ಕೂಡಿ ೧೨ ಸ್ಕಂಧಗಳಾಗಿರುವ 'ಶ್ರೀಮದ್‌ಭಾಗವತಪುರಾಣ'ವೆಂಬ ಕೃಷ್ಣಕಥೆಯನ್ನು ರಚಿಸಿ ಕೃತಕೃತ್ಯನಾದನು. ವ್ಯಾಸನಿಗೂ 'ಕೃಷ್ಣ'ನೆಂದೇ ಹೆಸರು. ಭಗವಂತನ ಒಂದು ಅಂಶಾವತಾರವೇ ವ್ಯಾಸರು.

೫೩. ರಾಮನ ಕಥೆ ತ್ರೇತಾಯುಗದ ಆದಿಯಲ್ಲಿನದು. ರಮಣೀಯವಾಗಿದ್ದರೂ ಇಂದಿನ ಕಲಿಯುಗದ ಜನರಿಗೆ ಆ ರೀತಿಯ ಧರ್ಮ, ಆಚರಣೆ ಬಹುದೂರದ್ದಾಗಿದೆ. ಶ್ರೀಕೃಷ್ಣ ಕಥೆ ದ್ವಾಪರಯುಗಾಂತ್ಯದಲ್ಲಿ ಆದದ್ದು. ಆದುದರಿಂದ ಕಲಿಯುಗಕ್ಕೆ ಬಹಳ ಹತ್ತಿರವಾದುದಾಗಿದೆ. ಅದರಲ್ಲಿನ ಪಾತ್ರಗಳ ಗುಣಸ್ವಭಾವಗಳಿಗೂ ಇಂದಿನ ಜನರ ಜೀವನ ನಡವಳಿಕೆಗೂ ಸ್ವಲ್ಪಹೋಲಿಕೆ ಸಿಗುತ್ತದೆ. ಅಂತೂ ಶ್ರೀರಾಮ ಶ್ರೀಕೃಷ್ಣರ ಕಥೆಗಳು ಸದಾ ನಿತ್ಯನೂತನವಾಗಿಯೇ ಇದ್ದು ಜನಪ್ರಿಯವಾಗಿವೆ.

೫೪. ರಾಮಾವತಾರದಲ್ಲಿ ಕಾಣುವ ಧರ್ಮಾಚರಣೆ, ಕೃಷ್ಣಾವತಾರದಲ್ಲಿ ಅಂತರ್ನಿಹಿತವಾಗಿರುವ ಜ್ಞಾನನಿಷ್ಠೆ - ಈ ಎರಡೂ ನಮ್ಮ ಜೀವನಗಳಲ್ಲಿ ಪ್ರವೇಶಿಸಿದಾಗಲೇ ಪೂರ್ಣತೆ, ಜೀವನ ಸಾರ್ಥಕ್ಯ ಸಿದ್ಧಿಸುತ್ತದೆ. ಶ್ರೀರಾಮ, ಶ್ರೀಕೃಷ್ಣ ಅವತಾರಗಳು ಎರಡೂ ಒಂದಕ್ಕೊಂದು ಪೂರಕವಾಗಿವೆಯೇ ವಿನಾ ವಿರೋಧವಾಗಿಲ್ಲ, ಆದುದರಿಂದಲೇ ರಾಮ, ಕೃಷ್ಣ ನಾಮಗಳು ಎರಡೂ ಒಂದರೊಂದಿಗೆ ಮತ್ತೊಂದು ಬೆರೆತು 'ರಾಮಕೃಷ್ಣ' ಎಂಬ ಏಕನಾಮವಾಗಿದೆ. ಹಾಗೆ ಬೆರೆತು ಹೋದಾಗಲೇ ಅಂದವು ಆನಂದವು.

ರಾಮನೂ ಕೃಷ್ಣನೂ ಆಗಿರುವವನು ಒಬ್ಬನೇ
ರಾಮನೂ ಕೃಷ್ಣನೂ ಆಗಬೇಕಾದವನೂ
ಒಬ್ಬನೇ

ಎರಡು ಪೂರ್ಣಾವತಾರಗಳು ಒಂದರೊಂದಿಗೆ ಮತ್ತೊಂದು ಸೇರಿ ಹೋದರೆ "ಪೂರ್ಣ ಮದಃ ಪೂರ್ಣಮಿದಂ" - ಎಲ್ಲವೂ ಪರಿಪೂರ್ಣವೇ.

ಹರೇ ರಾಮ ಹರೇ ರಾಮ
ರಾಮ ರಾಮ ಹರೇ ಹರೇ
ಹರೇ ಕೃಷ್ಣ ಹರೇ ಕೃಷ್ಣ
ಕೃಷ್ಣ ಕೃಷ್ಣ ಹರೇ ಹರೇ

ಓಂ ತಸ್ಮೈ ಶ್ರೀರಾಮಕೃಷ್ಣಾಯತೇ ನಮಃ



# ವಾರ್ತಾಲಹರಿ

## ಸ್ವಾಮಿ ವಿವೇಕಾನಂದರ ವಿಗ್ರಹ ಸ್ಥಾಪನೆ




ತಿರುಪತಿಯ ರೂಯಾ ಆಸ್ಪತ್ರೆಯ ಎದುರಿನ ಟ್ರಾಫಿಕ್ ಐಲ್ಯಾಂಡಿನಲ್ಲಿ ಸ್ವಾಮಿ ವಿವೇಕಾನಂದರ ವಿಗ್ರಹ ಸ್ಥಾಪನೆಯಾಗಿ ಅದರ ಅನಾವರಣ ಇದೇ ಸೆಪ್ಟಂಬರ್ 11 ರಂದು ಹೈದರಾಬಾದಿನ ರಾಮಕೃಷ್ಣ ಮಿಷನ್‌ನ ಸ್ವಾಮಿ ರಂಗನಾಥನಂದಜೀ ಅವರು ನೆರವೇರಿಸಿದರು. ತಿ.ತಿ.ದೇ., ರಾಮಕೃಷ್ಣಮಿಷನ್, ಹಾಗೂ ತಿರುಪತಿ ಫೈನ್ ಆರ್ಟ್ಸ್‌ಗಳ ಸಂಯುಕ್ತ ಆಶ್ರಯದಲ್ಲಿ ನೆರವೇರಿದ ಈ ಅನಾವರಣ ಸಮಾರಂಭದಲ್ಲಿ ತಿ.ತಿ.ದೇ. ಅಧ್ಯಕ್ಷ ಶ್ರೀ ಪಿ. ವೆಂಕಟೇಶ್ವರ್ಲು, ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶ್‌ಕುಮಾರ್ ಅವರುಗಳೂ ಸಾವಿರಾರು ಕಾರ್ಯಕರ್ತ, ಭಕ್ತ, ಯಾತ್ರಿಕರೊಡನೆ ಸೇರಿದ್ದರು.

ನಂತರ ಎಸ್. ವಿ. ಪ್ರೌಢಶಾಲೆಯ ಮೈದಾನದಲ್ಲಿ ಬಹಿರಂಗ ಸಭೆ ನಡೆಯಿತು. ಆಧ್ಯಾತ್ಮಿಕ ಚೈತನ್ಯದೊಡನೆ, ರಾಷ್ಟ್ರೀಯ ಸಮೈಕ್ಯತೆ ಮುಖ್ಯವೆಂದು ಬೋಧಿಸಿದ ವಿವೇಕಾನಂದರ ವಾಣಿ ಇಂದಿಗೂ ಪ್ರಸ್ತುತವಾದದ್ದು ಅವರ ವಿಗ್ರಹ, ಅವರ ನೆನಪು ನಮ್ಮಲ್ಲಿ ಆ ಚೈತನ್ಯವನ್ನೂ ಐಕ್ಯತೆಯನ್ನೂ ಉಂಟು ಮಾಡುವಂತಾಗಲಿ ಎಂದು ಸಭೆಯ ಅಧ್ಯಕ್ಷತೆ ವಹಿಸಿದ್ದ ಶ್ರೀ ಪಿ. ವೆಂಕಟೇಶರ್ಲು ಅವರು ಹಾರೈಸಿದರು. ಸ್ವಾಮಿ ರಂಗನಾಥಾವರದಜೀ ಅವರು ಮಾತನಾಡುತ್ತ ಶಾಂತಿ, ವಿಶ್ವಪ್ರೇಮಗಳನ್ನು ಸಾರಿ ಹೇಳುತ್ತ, ಆರೋಗ್ಯಕರ ಸಮಾಜ ಸ್ಥಾಪನೆಗಾಗಿಯೇ ಸ್ವಾಮಿ ವಿವೇಕಾನಂದರು ಜೀವನವನ್ನು ಗಂಧದ ಕೊರಡಿನಂತೆ ತೇಯ್ದರೆಂದು ವಿವರಿಸಿದರು. ತಿ.ತಿ.ದೇ ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶ್ ಕುಮಾರ್ ಅವರು ಮಾತನಾಡುತ್ತ ಮಾನವಸೇವೆಯೇ ಮಾಧವಸೇವೆ ಎಂದ ಸೂತ್ರವನ್ನು ಸರ್ವತ್ರ ಎತ್ತಿ ಹಿಡಿದ ವಿವೇಕಾನಂದರ ಧ್ಯೇಯ ವಾಕ್ಯವನ್ನು ಅವಧಾರಿಸಿದರು.

ಸ್ಥಳೀಯ ವಿನಾಯಕ ನಗರ್ ಪ್ರಾಂತ್ಯದಲ್ಲಿ ರಾಮಕೃಷ್ಣಮಿಷನ್ ನಿರ್ಮಿಸಲು ಯೋಜಿಸಿರುವ ಶ್ರೀ ರಾಮಕೃಷ್ಣ ಮಂದಿರಕ್ಕೆ ಸ್ವಾಮಿ ರಂಗನಾಥಾನಂದಜೀ ಅವರು ಶಿಲಾನ್ಯಾಸವನ್ನು ಅಂದು ಸಂಜೆ ನೆರವೇರಿಸಿದರು. ಈ ಸಮಾರಂಭದಲ್ಲಿ ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶ್‌ಕುಮಾರ್ ಮತ್ತಿತರರು ಹಾಜರಿದ್ದರು.

## ತಿರುಮಲೆಯಲ್ಲಿ ಆಂಧ್ರಪ್ರದೇಶದ ಹೈಕೋರ್ಟ್ ನ್ಯಾಯಾಧೀಶರು

ಆಂಧ್ರಪ್ರದೇಶದ ಹೈಕೋರ್ಟಿನ ಪ್ರಧಾನ ನ್ಯಾಯಾಧೀಶ ಶ್ರೀ ಪ್ರಭಾಶಂಕರ ಮಿಶ್ರಾ ಅವರು ಆಗಸ್ಟ್ 31 ರಂದು ಗುರುವಾರ ತಿರುಮಲೆಗೆ ಆಗಮಿಸಿದರು. ಅವರನ್ನು ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶಕುಮಾರ್, ಜೆ. ಇ. ಓ. ಶ್ರೀ ಬಾಲಸುಬ್ರಹ್ಮಣ್ಯಂ, ಸ್ವಾಗತ, ಡೆ. ಇ. ಓ. ಶ್ರೀ ಆಂಜನೇಯುಲು ಮೊದಲಾದವರು ಸ್ವಾಗತಿಸಿದರು. ನ್ಯಾಯಮೂರ್ತಿಗಳು ಶುಕ್ರವಾರದಂದು ಬೆಳಗ್ಗೆ ಸ್ವಾಮಿಯನ್ನು ಸಂದರ್ಶಿಸಿ ಆರಾಧಿಸಿದರು.



## ಕ್ಯೂಕಾಂಪ್ಲೆಕ್ಸ್‌ಗೆ ಎರಡನೆಯ ಪೇಷ್ಕಾರ್

ತಿರುಮಲೆಯ ವೈಕುಂಠಂ ಕ್ಯೂ ಕಾಂಪ್ಲೆಕ್ಸ್‌ನಲ್ಲಿ ಸ್ವಾಮಿ ದರ್ಶನಕ್ಕಾಗಿ ಕಾಯುವ ಯಾತ್ರಿಕರ ಕುಂದು ಕೊರತೆ, ಅಗತ್ಯ ಅನುಕೂಲ, ಸೌಲಭ್ಯ ಸೌಕರ್ಯ, ಶಾಂತಿ, ಸೌಹಾರ್ದ, ಗಳನ್ನೂ ನೋಡಿಕೊಳ್ಳಲು ಈಗಾಗಲೇ ಒಬ್ಬ ಪೇಷ್ಕಾರ್ ಇದ್ದು, ದಿನೇ ದಿನೇ ಹೆಚ್ಚುತ್ತಿರುವ ಯಾತ್ರಿಕ ಸಂದಣಿಯಿಂದಾಗಿ, ಅವರ ಕೆಲಸದ ವ್ಯಾಪ್ತಿ, ಹರವು, ಒತ್ತಡಗಳೂ ಹೆಚ್ಚುಗೊಳ್ಳುತ್ತಿರುವುದನ್ನು ಗಮನಿಸಿದ ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶ್‌ಕುಮಾರ್ ಅವರು, ಅಲ್ಲಿಯೇ ಈವರೆಗೆ ಎ.ಇ.ಓ. ಆಗಿ ಕೆಲಸ ನಿರ್ವಹಿಸುತ್ತಿದ್ದ ಶ್ರೀ ವರಪ್ರಸಾದ ಅವರನ್ನು ಎರಡನೆಯ ಪೇಷ್ಕಾರ್ ಪದವಿಗೇರಿಸಿ, ಕಾರ್ಯಭಾರವನ್ನು ಹಂಚಿಕೊಳ್ಳುವಂತೆ ಮಾಡಿದ್ದಾರೆ. ಈಗಾಗಲೇ ಪೇಷ್ಕಾರರಾಗಿರುವ ಶ್ರೀ ಕೋಟಿ ಮುನಿರತ್ನಂ ಅವರೊಡನೆ ಶ್ರೀ ವರಪ್ರಸಾದರು ಷಿಫ್ಟ್ ವ್ಯವಸ್ಥೆಯಲ್ಲಿ ಕಾರ್ಯ ನಿರ್ವಹಿಸುವರು.

## ಆಳವಂದಾರ್ ಅವತಾರೋತ್ಸವ

ತಿ.ತಿ.ದೇ. ಗಳ ಆಳ್ವಾರ್ ದಿವ್ಯಪ್ರಬಂಧ ಪ್ರಾಜೆಕ್ಟ್ ವತಿಯಿಂದ ತಿರುಪತಿಯ ಅನ್ನಮಾಚಾರ್ಯ ಕಲಾ ಮಂದಿರದಲ್ಲಿ ಆಗಸ್ಟ್ 28 ರಂದು ಯಾಮುನಾಚಾರ್ಯರ ತಿರುನಕ್ಷತ್ರವನ್ನು ಆಳವಂದಾರ್ ಅವತಾರೋತ್ಸವವಾಗಿ ಆಚರಿಸಲಾಯಿತು. ತಿ.ತಿ.ದೇವಸ್ಥಾನಗಳ ಆರ್ಥಿಕ ಸಲಹಾದಾರ ಶ್ರೀ ಗುರುಮೂರ್ತಿ ಅವರ ಅಧ್ಯಕ್ಷತೆಯಲ್ಲಿ ಶ್ರೀ ಮುದಿವರ್ತಿ ಕೊಂಡಮಾಚಾರ್ಯರು ಆಳವಂದಾರ್ ಜೀವನ - ಸಾಹಿತ್ಯಗಳ ಪರಿಚಯ - ಪ್ರಬೋಧಗಳನ್ನು ವಿವರಿಸಿದರು. ಶ್ರೀ ಚಕ್ರವರ್ತಿ ರಂಗ ರಾಮಾನುಜಂ ಅವರು ರಾಮಾಯಣ ಏಕಶ್ಲೋಕಿಯನ್ನು ವಿವರಿಸಿದರು. ಈ ಉಪನ್ಯಾಸಗಳಿಗೂ ಮೊದಲು ಚೆನ್ನಜೀಯರ್ ಮಠದ ಆಸ್ಥಾನ ಪಂಡಿತರಿಂದ ದಿವ್ಯಪ್ರಬಂಧಗೋಷ್ಠಿ ನಡೆಯಿತು.

ಆಳ್ವಾರ್ ದಿವ್ಯಪ್ರಬಂಧ ಪ್ರಾಜೆಕ್ಟ್ ಅಧೀಕ್ಷಕ ಶ್ರೀ ವೆಂಕಟ್ರಾಮರೆಡ್ಡಿ ಅವರು ಸಭೆಯನ್ನು ಸ್ವಾಗತಿಸಿ, ಪರಿಚಯ ಕಾರ್ಯಕ್ರಮವನ್ನು ನೆರವೇರಿಸಿದರು. ಪ್ರಾಜೆಕ್ಟ್ ಅಧಿಕಾರಿ ಆಚಾರ್ಯ ಶೌರಿರಾಜನ್ ಅವರು ಪ್ರಾಜೆಕ್ಟ್ ಕಾರ್ಯಕ್ರಮಗಳ ವರದಿಯನ್ನು ಒಪ್ಪಿಸಿ, ವಂದನಾರ್ಪಣೆ ಸಲ್ಲಿಸಿದರು.

## ಯಾತ್ರಿಕ ವನ

ತಿರುಮಲೆಯಿಂದ ಐದು ಕಿಲೋಮೀಟರ್ ದೂರದಲ್ಲಿ ಯಾತ್ರಿಕವನವನ್ನು ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶ್‌ಕುಮಾರ್ ಅವರು ಹುಟ್ಟುಹಾಕಿದ್ದಾರೆ. ತಿರುಮಲೆಯ ಪ್ರಾಂತ್ಯವನ್ನೆಲ್ಲ ಹರಿತ್ ಛಾಯೆಯಿಂದ ತುಂಬಿ, ವಾತಾವರಣವನ್ನು ತಂಪಾಗಿರಿಸುವ ಉದ್ದೇಶದಿಂದ ಉಂಟಾಗಿರುವ ಅರಣ್ಯಾಭಿವೃದ್ಧಿ ಕಾರ್ಯಕ್ರಮ ಸೆಪ್ಟಂಬರ್ 15 ರಂದು ಶುಕ್ರವಾರ ಐದು ಎಕರೆಯ ಸ್ಥಳದಲ್ಲಿ, ನೇರಿಳೆ, ಹುಣಿಸೆ, ಚೇಪೆ ಸಸಿಗಳನ್ನು ಯಾತ್ರಿಕರು ನೆಡುವುದರಿಂದ ಆರಂಭವಾಗಿದೆ. ತಿ.ತಿ.ದೇ ಅರಣ್ಯ ವಿಭಾಗ ಸಲಹಾಧಿಕಾರಿ ಶ್ರೀ ಶಂಕರರೆಡ್ಡಿ, ಮಂಡಲ ಅರಣ್ಯಾಧಿಕಾರಿ ಶ್ರೀ ಸುಬ್ಬಾರೆಡ್ಡಿ ಮೊದಲಾದವರು ತಿ.ತಿ.ದೇ. ಅರಣ್ಯಾಭಿವೃದ್ಧಿ ಇಲಾಖೆಯವರೊಡನೆ ಈ ಕಾರ್ಯಕ್ರಮದಲ್ಲಿ ಪಾಲುಗೊಂಡಿದ್ದರು.






## ಧರ್ಮಕರ್ತರ ಮಂಡಳಿಯ ತೀರ್ಮಾನಗಳು

ತಿರುಪತಿಯ ಶ್ರೀ ವೆಂಕಟೇಶ್ವರ ರಾಮನಾರಾಯಣ ರೂಯಾ ಆಸ್ಪತ್ರೆಯ ಪೀಡಿಯಾಟ್ರಿಕ್ಸ್ ವಿಭಾಗಕ್ಕೆ 1.70 ಲಕ್ಷ ರೂಪಾಯಿಗಳ ಆರ್ಥಿಕ ನೆರವು ನೀಡಬೇಕೆಂದು ತೀರ್ಮಾನಿಸಲಾಗಿದೆ.

ತಿ.ತಿ.ದೇ. ಬೋರ್ಡ್ ಅಧ್ಯಕ್ಷ ಶ್ರೀ ಪಿ. ವೆಂಕಟೇಶ್ವರ್ಲು, ಅವರ ಅಧ್ಯಕ್ಷತೆಯಲ್ಲಿ ನಡೆದ ಈ ಸಭೆಯಲ್ಲಿ ತಿರುಮಲೆಯ ಕಲ್ಯಾಣಕಟ್ಟೆಯಲ್ಲಿ ಕೆಲಸ ಮಾಡುತ್ತಿರುವ ಉದ್ಯೋಗಿಗಳಿಗೆ ಕೆಲಸದ ಒತ್ತಡಕ್ಕೆ ಅನುಗುಣವಾಗಿ ಹೆಚ್ಚಿನ ಭತ್ಯವನ್ನು ನೀಡಬೇಕೆಂದು ತೀರ್ಮಾನಿಸಲಾಯಿತು.



## ನಾರಾಯಣ ಪೇಟೆಯಲ್ಲಿ ಭಾಗವತ ಸಪ್ತಾಹ

ತಿ.ತಿ.ದೇ. ದಾಸಸಾಹಿತ್ಯ ಪ್ರಾಜೆಕ್ಟ್ ಹಾಗೂ ಸ್ಥಳೀಯ ಶ್ರೀ ರಾಘವೇಂದ್ರಸ್ವಾಮಿ ಸೇವಾ ಸಮಿತಿಯವರ ಸಂಯುಕ್ತ ಆಶ್ರಯದಲ್ಲಿ ಶ್ರೀ ರಾಘವೇಂದ್ರಸ್ವಾಮಿಯವರ ಬೃಂದಾವನ ಪ್ರತಿಷ್ಠೆಯ ಎಂಭತ್ತನೆಯ ವಾರ್ಷಿಕೋತ್ಸವ ಹಾಗೂ ಭಾಗವತ ಸಪ್ತಾಹಗಳು 5-8-95 ರಿಂದ 13-8-95 ರವರೆಗೆ ನಡೆದು ಯಶಸ್ವಿಯಾದವು.

ಅಕ್ಷೋಭ್ಯ ತೀರ್ಥ ಮಠಾಧೀಶರಾದ ಶ್ರೀ ಮುತ್ತಗಿ ರಘುಪ್ರೇಮ ತೀರ್ಥರು ನಾರಾಯಣ ಪೇಟೆಯ ಪಕ್ಕದಲ್ಲಿ (ಪರಿಮಳಾಪುರ) ಶಾಲಿವಾಹನ ಶಕ 1837 ರಲ್ಲಿ (22-12-1915) ಶ್ರೀ ರಾಘವೇಂದ್ರಸ್ವಾಮಿಗಳ ಬೃಂದಾವನವನ್ನೂ, ಶ್ರೀ ಲಕ್ಷ್ಮೀ ನೃಸಿಂಹರನ್ನೂ ಪ್ರತಿಷ್ಠಾಪಿಸಿದ್ದು 1995 ರಲ್ಲಿ ಇವುಗಳ 80ನೆಯ ವಾರ್ಷಿಕೋತ್ಸವವನ್ನು ಸಾಂಸ್ಕೃತಿಕ, ಧಾರ್ಮಿಕ ಕಾರ್ಯಕ್ರಮಗಳಿಂದಲೂ, ಭಜನೆ, ಕೀರ್ತನೆಗಳಿಂದಲೂ, ಹೋಮ ಹವನಗಳಿಂದಲೂ ಪಂಚಾಮೃತ ಸೇವೆ, ಪಲ್ಲಕಿ ಸೇವೆಗಳಿಂದಲೂ ವೈಭವದಿಂದ ನಡೆಸಲಾಯಿತು. ಮಾನವಿಯ ಪವಮಾನ ಭಜನಾ ಮಂಡಳಿ, ಶಕ್ತಿನಗರದ ಕೊರವರೇಶ, ಭಜನಾಮಂಡಳಿ, ಸಿಂಧನೂರಿನ ಗುರುರಾಜ ಭಜನಾ ಮಂಡಳಿಗಳು ಈ ಉತ್ಸವಗಳಲ್ಲಿ ಸಕ್ರಿಯವಾಗಿ ಪಾಲುಗೊಡವು. ಧಾರ್ಮಿಕ ಉಪನ್ಯಾಸಗಳು ನಡೆದು ಪ್ರಾಜೆಕ್ಟ್ ವತಿಯಿಂದ ವಿದ್ವಾಂಸರುಗಳು ಹರಿದಾಸ ಸಾಹಿತ್ಯದ ವಿವಿಧ ಮುಖಗಳ ಬಗ್ಗೆ ವಿವರಣೆ ನೀಡಿದರು ಶ್ರೀ ಮುರಳೀಧರಾಚಾರ್ಯರು ಭಾಗವತದ ಸಪ್ತಮಸ್ಕಂಧವನ್ನು ವಿವರಿಸಿದರೆ ಶ್ರೀ ನಾಗರಾಜಾಚಾರ್ಯರು ದಾಸ ಸಾಹಿ



ತ್ಸವ ಭಕ್ತಿ ಸ್ತೋತ್ರಗಳನ್ನು ವಿವರಿಸಿದರು. ಶ್ರೀ ರಾಘವೇಂದ್ರಾಚಾರ್ಯರು ಪ್ರಹ್ಲಾದ ಚರಿತೆಯನ್ನು ಹರಿಕಥೆಯಾಗಿಸಿದರೆ ಶ್ರೀ ಶಿವಮೊಗ್ಗ ಶ್ರೀನಿವಾಸದಾಸರು ಮತ್ತೊಂದು ಹರಿಕಥೆಯನ್ನು ಪ್ರಸ್ತುತ ಪಡಿಸಿದರು. ಶ್ರೀ ನಾಗೇಂದ್ರಪ್ರಸಾದರು ಭಕ್ತಿಯ ಔನ್ನತ್ಯವನ್ನು ಕುರಿತು ಮಾತನಾಡಿದರು. ನಗರ ಸಂಕೀರ್ತನೆ, ಮೆರವಣಿಗೆಗಳು ನಡೆದು ಯಶಸ್ವಿಯಾದವು.



## ಉತ್ಸವ ಮೂರ್ತಿಗೆ ಹೊಸ ಕಿರೀಟ

ಶ್ರೀಲಂಕಾದೇಶದ ಶ್ರೀ ಸದಾಶಿವಂ ಎಂಬ ಪಾರಿಶ್ರಾಮಿಕವೇತ್ತರು ಸುಮಾರು 52 ಲಕ್ಷ ರೂಪಾಯಿಗಳ ವಜ್ರಕಿರೀಟವನ್ನು ಶ್ರೀ ವೆಂಕಟೇಶ್ವರಸ್ವಾಮಿಯ ಉತ್ಸವ ಮೂರ್ತಿಗೆಂದು (ಶ್ರೀ ಮಲೆಯಪ್ಪಸ್ವಾಮಿಗೆ) ಮಾಡಿಸಿ ನೀಡಿದ್ದಾರೆ. ಈ ಕಿರೀಟವನ್ನು ಬೊಂಬಾಯಿನ ತ್ರಿಭುವನದಾಸ್ ಜ್ಯುವೆಲರಿ ಸಂಸ್ಥೆಯ ಪ್ರತಿನಿಧಿ ಶ್ರೀ ಕಲ್ಯಾಣಪಾಲ್ ಅವರು ತಿ.ತಿ.ದೇ. ಅಧಿಕಾರಿಗಳಿಗೆ ನೀಡಿದ್ದಾರೆ. ಸುಮಾರು 2.11 ಕಿಲೋ. ತೂಕದ ಈ ಕಿರೀಟಕ್ಕೆ ಎರಡು ಕಿಲೋಗ್ರಾಂ ಬಂಗಾರ, ಎರಡು ಸಾವಿರಕ್ಕೂ ಹೆಚ್ಚಿನ ವಜ್ರಗಳನ್ನು ಬಳಸಲಾಗಿದೆ.

ಶ್ರೀ ಮಲೆಯಪ್ಪಸ್ವಾಮಿಯ ಇಬ್ಬರು ಸಾಚ್ಚಿಯಾರರು - ಶ್ರೀದೇವಿ ಭೂದೇವಿಯರಿಗೂ - ಇಂತಹವೇ ಕಿರೀಟಗಳನ್ನು ತಯಾರಿಸಬೇಕೆಂದು ಯೋಚಿಸುತ್ತಿರುವುದಾಗಿ ತಿ. ತಿ. ದೇವಸ್ಥಾನ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ರಮೇಶ್‌ಕುಮಾರ್ ತಿಳಿಸಿದ್ದಾರೆ.

# ಮುಂದಿನ ಸಂಚಿಕೆಯಲ್ಲಿ

## ಸಪ್ತಗಿರಿ --- ನವಂಬರ್ 1995

**ಪರಮ ವೈಕುಂಠ :**

ವಿಷ್ಣುವಿನ ಧಾಮವನ್ನು ವೈಕುಂಠವೆಂದು ಕರೆಯುವುದು ತಿಳಿದದ್ದೇ. ಅದೆಲ್ಲಿದೆ? ಹೇಗಿದೆ ಅಲ್ಲಿ ಯಾರ್ಯಾರು ಇರುತ್ತಾರೆ? ಸ್ವರ್ಗ ವೈಕುಂಠಗಳ ನಡುವಣ ಸಂಬಂಧವೇನು? ಭೂವೈಕುಂಠವೆಂಬುದದೇನು - ಎಂಬುದನ್ನು ಶಾಸ್ತ್ರೀಯವಾಗಿ ವಿವರಿಸುವ ಲೇಖನ - ಪ್ರಸ್ತುತ ಪಡಿಸುವವರು - ಸಿ. ಗೋವಿಂದಾಚಾರ್ಯ.

**ವಿಷ್ಣು ಸಹಸ್ರನಾಮದ ಹಿರಿಮೆ :**

ಭಗವನ್ನಾಮ ಸಂಕೀರ್ತನೆಯಲ್ಲಿ ವಿಷ್ಣು ಸಹಸ್ರನಾಮ ವಿಶಿಷ್ಟಸ್ಥಾನ ಪಡೆದದ್ದು. ಚತುರ್ವಿಧ ಪುರುಷಾರ್ಥ ಸಾಧನಕಾರಿಯಾದ ಈ ಸಹಸ್ರನಾಮದ ಹಿರಿಮೆ ಗರಿಮೆಗಳನ್ನು ವಿವರಿಸಿದ್ದಾರೆ - ವಿದ್ವಾನ್ ರಘುಸುತ ಅವರು.

**ದಾರ್ಶನಿಕ ಯಾಜ್ಞವಲ್ಕ್ಯ :**

ಶುಕ್ಲಯಜುರ್ವೇದವನ್ನು ಸಂಪಾದಿಸಿ ನೀಡಿದ ಮಹಾನುಭಾವ ಯಾಜ್ಞವಲ್ಕ್ಯರ ಕಾಣಿಕೆಯ ಒಂದು ನೋಟವನ್ನು ನೀಡಿದ್ದಾರೆ - ಜಿ. ಶ್ರೀಧರ್.

**ಭಗವಂತನನ್ನು ಕಾಣುವ ದಾರಿ :**

ಶರೀರದಿಂದಲೇ ಎಲ್ಲವನ್ನು ಸಾಧಿಸಬೇಕು ಎಂದಾಗ ದೇಹಿಗೆ ಭಗವಂತನನ್ನು ಕಾಣುವ ಮಾರ್ಗವಾದರೂ ದೇಹದ ಮೂಲಕವೇ ಆಗಬೇಕು. ಅದರ ರೀತಿ ನೀತಿಗಳನ್ನು ವಿವರಿಸಿದ್ದಾರೆ ಇಂಜನೀಯರ್ ಎಚ್. ಎಸ್. ನರಸಿಂಹಮೂರ್ತಿ.

**ವಿಜಯದಾಸರ ಮಹಿಮೆ :**

ವಿಜಯದಾಸರು ಹರಿದಾಸ ಸಾಹಿತ್ಯದ ಎರಡನೆಯ ಹಂತದ ಹಿರಿಯರು. ಹಲವಾರು ಮಂದಿ ಅವರ ಶಿಷ್ಯಪ್ರಶಿಷ್ಯರು ಅವರನ್ನು ಕೊಂಡಾಡಿದ್ದುಂಟು. ಪ್ರಸನ್ನ ಶ್ರೀನಿವಾಸದಾಸರು ಕಂಡಂತೆ ವಿಜಯದಾಸರ ಮಹಿಮೆಯನ್ನು ವಿವರಿಸಿದ್ದಾರೆ - ಕೆ. ಆರ್. ಗೋಪಾಲಕೃಷ್ಣ.

ಜೊತೆಗೇ ಹಲವು ಹನ್ನೊಂದು ಇತರ ಮುಖ್ಯ ಲೇಖನಗಳೊಡನೆ ಪ್ರಕಟವಾಗಲಿರುವ ಸಪ್ತಗಿರಿಯ ಪ್ರತಿಯನ್ನು ಕಾರ್ಯಿರಿಸಿ.

**ಬಿಡಿ ಪ್ರತಿ - ರೂ. 2-00 ಮಾತ್ರ ವಾರ್ಷಿಕ ಚಂದಾ ರೂ. 24-00**

ತಮ್ಮ ವಾರ್ಷಿಕ ಚಂದಾ ಹಣವನ್ನು - ಸಂಪಾದಕರು ಸಪ್ತಗಿರಿ, ತಿ.ತಿ.ದೇ. ತಿರುಪತಿ ಇವರಿಗೆ ಎಂ.ಓ. / ಡಿ. ಡಿ. ಮೂಲಕ ಕಳುಹಿಸಿ.

Published on behalf of T. T. Devasthanams by N. S. Ramamurthy, M.A., Editor and Printed at T.T.D. Press by P. Mohan Rao, Manager, T.T.D. Press, Tirupati - 517 507

